

ಡಾ|| ಎಂ. ಪೂರ್ವಾಚಾರ್

1990ರಲ್ಲಿ ಮೈಸೂರು ವಿಶ್ವವಿದ್ಯಾನಿಲಯದ ಬಿ.ಎ., ಪದವಿ ಪಡೆದರು. 1992ರಲ್ಲಿ ಕುವೆಂಪು ವಿ.ವಿ. ಯಿಂದ ಸಮಾಜಶಾಸ್ತ್ರ ವಿಷಯದಲ್ಲಿ ಎಂ.ಎ., ಪದವಿ ಪಡೆದು 1992 ರಿಂದ 1997ರವರೆಗೆ ಡಾ| ಎಚ್.ಎಂ. ಪಂಚಾಕ್ಷರಯ್ಯನವರ ಮಾರ್ಗದರ್ಶನದಲ್ಲಿ ಅಧ್ಯಯನ ನಡೆಸಿ "ಕನ್ನಡ ಚಲನಚಿತ್ರಗಳಲ್ಲಿ ಸ್ತ್ರೀ ಪಾತ್ರ ನಿರೂಪಣೆ - ಒಂದು ಸಮಾಜ ಶಾಸ್ತ್ರೀಯ ಅಧ್ಯಯನ" ಎಂಬ ವಿಷಯದ ಮೇಲೆ ಮಹಾ ಪ್ರಬಂಧ ಸಾದರಪಡಿಸಿ ಕುವೆಂಪು ವಿ.ವಿ. ದಿಂದ ಪಿಎಚ್.ಡಿ. ಪದವಿ ಪಡೆದರು.

1992 ರಿಂದ ಎಸ್.ಕೆ.ಆರ್.ಎಸ್. ಕಾಲೇಜು, ನೇರಲಕೆರೆ; ಸರ್ಕಾರಿ ಪ್ರಥಮ ದರ್ಜೆ ಕಾಲೇಜು, ಹೊಸದುರ್ಗ; ಕುವೆಂಪು ವಿ.ವಿ.ಯ ಸ್ನಾತಕೋತ್ತರ ಸಮಾಜಶಾಸ್ತ್ರ ವಿಭಾಗದಲ್ಲಿ ಸಮಾಜಶಾಸ್ತ್ರ ಉಪನ್ಯಾಸಕರಾಗಿ ಕೆಲಸ ಮಾಡಿದ್ದಾರೆ. 1998ರಿಂದ 2003ರವರೆಗೆ ಕುವೆಂಪು ವಿಶ್ವವಿದ್ಯಾನಿಲಯದ ಸಹ್ಯಾದ್ರಿ ಕಲಾ ಮತ್ತು ವಾಣಿಜ್ಯ ಕಾಲೇಜು, ಶಿವಮೊಗ್ಗ ಇಲ್ಲಿ ಸಮಾಜಶಾಸ್ತ್ರ ಅಧ್ಯಾಪಕರಾಗಿ ಕಾರ್ಯ ನಿರ್ವಹಿಸಿರುತ್ತಾರೆ. ಪ್ರಸ್ತುತ ಸ್ನಾತಕೋತ್ತರ ಸಮಾಜಶಾಸ್ತ್ರ ಅಧ್ಯಯನ ವಿಭಾಗ, ಮಹಿಳಾ ವಿಶ್ವ ವಿದ್ಯಾನಿಲಯ, ವಿಜಾಪುರ ಇಲ್ಲಿ ಸಮಾಜಶಾಸ್ತ್ರದ ರೀಡರ್ ಆಗಿ ಕೆಲಸ ಮಾಡುತ್ತಿದ್ದಾರೆ.

"ಭಾರತೀಯ ಸಮಾಜ ಮತ್ತು ಸಂಸ್ಕೃತಿ", "ಭಾರತೀಯ ಸಿನಿಮಾ ಪ್ರೇಕ್ಷಕರು ಮತ್ತು ಸ್ತ್ರೀ ಪಾತ್ರ", "ಸಮಾಜ ಶಾಸ್ತ್ರದ ಪರಿಕಲ್ಪನೆಗಳು", "ಭಾರತೀಯ ಸಮಾಜದ ಪರಿಚಯ", ಎಂಬಂತಹ ಕೃತಿಗಳನ್ನು ಬರೆದು ಪ್ರಕಟಿಸಿರುವ ಇವರು, ರಾಜ್ಯ ಮತ್ತು ರಾಷ್ಟ್ರ ಮಟ್ಟದ ಅನೇಕ ವಿಚಾರ ಸಂಕಿರಣ, ಕಾರ್ಯಾಗಾರಗಳಲ್ಲಿ ಭಾಗವಹಿಸಿ ಪ್ರಬುದ್ಧವಾದ ಪ್ರಬಂಧಗಳನ್ನು ಮಂಡಿಸಿ ಮೆಚ್ಚುಗೆ ಗಳಿಸಿದ್ದಾರೆ. ಇವರು ಮಹಿಳೆ, ಮಾಧ್ಯಮ, ಕಲೆ ಮತ್ತು ಸಾಹಿತ್ಯ ಸಮಾಜಶಾಸ್ತ್ರದಲ್ಲಿ ಹೆಚ್ಚಿನ ಸಂಶೋಧನೆಗಳನ್ನು ನಡೆಸುತ್ತಿದ್ದು ಅಮೂಲ್ಯ ಜ್ಞಾನ ಶಾಖೆಗಳನ್ನು ನೀಡುವರೆಂಬ ಭರವಸೆ ಮೂಡಿಸಿದ್ದಾರೆ.

ಶಿಲ್ಪ ಕಲಾವಿದರ ಮಾಲೆ : ೧೦

# ಎಂ. ಪರಮೇಶ್ವರಾಚಾರ್ಯ

ಡಾ|| ಎಂ. ಪೂರ್ವಾಚಾರ್




ಕರ್ನಾಟಕ ಶಿಲ್ಪಕಲಾ ಅಕಾಡೆಮಿ
ಮೇಲ್ಮನೆ, ಕನ್ನಡಭವನ
ಜೆ.ಸಿ. ರಸ್ತೆ, ಬೆಂಗಳೂರು – 560 002

**PARAMESWARACHARYA**
A Biography by
**Dr. M. Poorvachar**
*Published by*
N. Marishamachar
Registrar
Karnataka Shilpakala Academy
Ist Floor, Kannada Bhavana
J.C. Road, Bangalore - 560 002

ಮೊದಲ ಮುದ್ರಣ : 2004

ಪ್ರತಿಗಳು : 1000

ಬೆಲೆ ರೂ. 15-00

ಮುದ್ರಕರು
**ಫ್ರೆಂಡ್ಸ್ ಕಾಮ್‌ಟೆಕ್**
5 ನೇ ಮುಖ್ಯರಸ್ತೆ, ಚಾಮರಾಜಪೇಟೆ
ಬೆಂಗಳೂರು - 560 018
✆ 2652 8454

# ಮೊದಲ ಮಾತು

ನಮ್ಮ ರಾಜ್ಯ ಶಿಲ್ಪಕಲೆಗೆ ವಿಶ್ವದಲ್ಲೇ ಹೆಸರು ಪಡೆದಿದ್ದು 'ಶಿಲ್ಪಕಲೆಯ ತವರೂರು' ಎಂದು ಕರೆಯಲ್ಪಟ್ಟಿವೆ. ಈ ನಾಡಿನಲ್ಲಿ ಅನೇಕ ಶಿಲ್ಪ ಶೈಲಿಗಳು ಹುಟ್ಟಿ ಅವು ತಮ್ಮದೇ ಆದ ವಿಶಿಷ್ಟ ಸ್ಥಾನವನ್ನು ಪಡೆದಿವೆ. ನಮ್ಮ ರಾಜ್ಯದಲ್ಲಿ ಶಿಲ್ಪಕಲೆಗಾಗಿ ದುಡಿದವರು ಹಲವಾರು ಶಿಲ್ಪಿಗಳು. ಕೆಲವು ಶಿಲ್ಪಿಗಳು 'ಶಿಲ್ಪ' ರಚಿಸುವುದೇ ತಮ್ಮ ಕಾಯಕವೆಂದು ತಿಳಿದು, ಶಿಲ್ಪದ ಮೇಲೆ ತಮ್ಮ ಹೆಸರುಗಳನ್ನು ನಮೂದಿಸಿರುವುದಿಲ್ಲ. ಸಾಂಪ್ರದಾಯಿಕವಾಗಿ ಶಿಲ್ಪಕಲೆ ಬೆಳೆದು ಬಂದಿದ್ದು, ಇಂದಿಗೂ ಈ ಕಲೆಗಳನ್ನು ಉಳಿಸಿ, ಬೆಳೆಸಿಕೊಂಡು ಬಂದಿರುವವರು ನಮ್ಮಲ್ಲಿದ್ದಾರೆ. ಶಿಲ್ಪಕಲಾ ಅಕಾಡೆಮಿ ಇಂತಹ ಹಿರಿಯ ಶಿಲ್ಪ ಕಲಾವಿದರು ಮತ್ತು ಅವರ ಕೃತಿಗಳ ಬಗ್ಗೆ ಪುಸ್ತಕಗಳನ್ನು ಪ್ರಕಟಿಸುವ ಯೋಜನೆಯನ್ನು ಪ್ರಾರಂಭಿಸಿದೆ. ಈ ಪುಸ್ತಕಗಳು ಈ ಶಿಲ್ಪಿಗಳ ಮತ್ತು ಕೃತಿಗಳ ಪರಿಚಯ ಮಾಡಿಸುವುದರ ಜೊತೆಗೆ ರಾಜ್ಯದಲ್ಲಿ ಶಿಲ್ಪಕಲೆ ಬೆಳೆದು ಬಂದ ದಾರಿ ಮತ್ತು ಅದರ ಚರಿತ್ರೆಯನ್ನು ತಿಳಿಯಲು ಸಹಾಯಕವಾಗುವುದು.

ಈ ಯೋಜನೆಯಲ್ಲಿ ನಮ್ಮ ನಾಡಿನ ಹೆಸರಾಂತ ಶಿಲ್ಪಿಗಳಾದ ಶ್ರೀ ಎಂ. ಪರಮೇಶ್ವರಾಚಾರ್ಯ ಅವರ ಬಗ್ಗೆ ಡಾ. ಎಂ. ಪೂರ್ವಾಚಾರ್ ಅವರು ಪುಸ್ತಕವನ್ನು ಬರೆದುಕೊಟ್ಟಿದ್ದಾರೆ. ಶ್ರೀಯುತರು ಗ್ರಾಮೀಣ ಭಾಗದಲ್ಲಿ ವಾಸಿಸುತ್ತಿರುವ ಶ್ರೀ ಎಂ. ಪರಮೇಶ್ವರಾಚಾರ್ಯ ಅವರ ಬಗ್ಗೆ ಸಂಕ್ಷಿಪ್ತವಾಗಿ ಅವರ ಜೀವನ ಮತ್ತು ಕೃತಿಗಳ ಬಗ್ಗೆ ವಿವರವಾಗಿ ಬರೆದಿದ್ದಾರೆ. ಶ್ರೀಯುತರಿಗೆ ಅಕಾಡೆಮಿಯ ಪರವಾಗಿ ವಂದನೆಗಳನ್ನು ಸಲ್ಲಿಸುವೆ. ನಮ್ಮ ನಾಡಿನ ಜನರು ಅಕಾಡೆಮಿಯ ಈ ಸಾಧನೆಯನ್ನು ಸ್ವಾಗತಿಸುವರೆಂದು ಆಶಿಸುತ್ತೇವೆ.

ಬೆಂಗಳೂರು

ಎಸ್.ಜಿ. ನೀಲಕಂಠಾಚಾರ್
ಅಧ್ಯಕ್ಷರು
ಕರ್ನಾಟಕ ಶಿಲ್ಪಕಲಾ ಅಕಾಡೆಮಿ

# ಎಂ. ಪರಮೇಶ್ವರಾಚಾರ್ಯ

ಭಾರತವು ಬಹು ಪ್ರಾಚೀನ ಕಾಲದಿಂದಲೂ ಸಂಸ್ಕೃತಿ, ಧರ್ಮ, ಕಲೆ, ಶಿಲ್ಪಕ್ಕೆ ಹೆಸರುವಾಸಿಯಾಗಿದೆ. ಭಾರತೀಯ ಸಂಸ್ಕೃತಿಯಲ್ಲಿ ಕಲೆ, ಧರ್ಮ ಮತ್ತು ತತ್ವಜ್ಞಾನದ ಸಂಮಿಶ್ರಣವನ್ನು ಕಾಣಬಹುದಾಗಿದೆ. ಭಾರತೀಯರ ಜೀವನ ಮತ್ತು ಚಿಂತನೆಯಲ್ಲಿ ಇವು ಬಹು ಸುಂದರವಾಗಿ ಒಂದಕ್ಕೊಂದು ಹೆಣೆದುಕೊಂಡಿದೆ. ಭಾರತೀಯ ಸಂಸ್ಕೃತಿಯ ತಳಪಾಯವೇ ಇದಾಗಿದೆ. ಕ್ರಿ.ಪೂ. 4000 ವರ್ಷಗಳ ಹಿಂದೆಯೇ ಹುಟ್ಟಿಕೊಂಡು ಬೆಳೆದ ಸಂಸ್ಕೃತಿಯು ನಿರಂತರವಾಗಿ ನಾಗರೀಕತೆಯೊಂದಿಗೆ ಹಬ್ಬತೊಡಗಿದೆ.

ಸಂಸ್ಕೃತಿಯು ಅನುಪಮವಾದ ಆಸ್ತಿ. ಮಾನವರಲ್ಲಿ ಮಾತ್ರ ಸಂಸ್ಕೃತಿ ಕಂಡುಬರುತ್ತದೆ. ಮಾನವರಲ್ಲಿರುವಂತಹ ಸಂಸ್ಕೃತಿಯನ್ನು ಪ್ರಾಣಿಗಳಲ್ಲಿ ಕಾಣಲು ಸಾಧ್ಯವಿಲ್ಲ. ಮಾನವನು ಸಮೂಹ ಜೀವಿ, ಹಾಗೆಯೇ ಸಾಂಸ್ಕೃತಿಕ ಜೀವಿ. ಸಂಸ್ಕೃತಿಯು ನಮ್ಮ ಕಲೆ, ಶಿಲ್ಪ, ನಂಬಿಕೆ, ಆಚರಣೆ, ಮೌಲ್ಯ ಇವುಗಳನ್ನೆಲ್ಲಾ ಒಳಗೊಂಡಿದೆ. ಒಟ್ಟಾರೆ ಭೌತಿಕ, ಅಭೌತಿಕಾಂಶಗಳನ್ನೆಲ್ಲಾ ಸಂಸ್ಕೃತಿಯು ಒಳಗೊಂಡಿದೆ. ನಮ್ಮ ಸಾಮಾಜಿಕ ಪರಂಪರೆಯೇ ನಮ್ಮ ಸಂಸ್ಕೃತಿಯಾಗಿದೆ.

ಸಂಸ್ಕೃತಿಯು ಇತರರೊಂದಿಗೆ ಹಂಚಿಕೊಳ್ಳಲ್ಪಡುವಂತಹದು. ಅದು ನಿರಂತರವಾದುದು ಮತ್ತು ಸಂಗ್ರಹಕಾರಕವಾದುದು. ಸಂಸ್ಕೃತಿಯು ಆದರ್ಶ ಸೂಚಕವಾದುದು. ಸಂಸ್ಕೃತಿಯು 1. ಜ್ಞಾನ 2. ನಂಬಿಕೆ 3. ಮೌಲ್ಯ ಮತ್ತು ನಿಯಮ 4. ಸಂಕೇತಗಳು ಎಂಬಂತಹ ನಾಲ್ಕು ಮೂಲಾಂಶಗಳನ್ನು ಹೊಂದಿದೆ. ಇವುಗಳಲ್ಲಿ

ಮೊದಲ ಮೂರು ಅಂಶಗಳು ಅಭೌತಿಕವಾದವು. ನಾಲ್ಕನೆಯ ಅಂಶವು ಅತ್ಯಂತ ಪ್ರಮುಖವಾದುದು ಮತ್ತು ಭೌತಿಕವಾದುದು. ಅಭೌತಿಕಾಂಶಗಳಿಗೆ ಮೂರ್ತ ರೂಪ ಕೊಡುವುದೇ ಸಂಕೇತಗಳು.

ಈ ಭೌತಿಕಾಂಶಗಳಿಂದಲೇ ಮನುಷ್ಯ ಇಂದು ಹೆಚ್ಚು ಸುಖವನ್ನು ಹೊಂದಬಯಸುತ್ತಿದ್ದಾನೆ. ಈ ಮೂಲಾಂಶಗಳನ್ನಾಧರಿಸಿಯೇ ಸಂಸ್ಕೃತಿಯನ್ನು ಭೌತಿಕ ಮತ್ತು ಅಭೌತಿಕ ಎಂದು ವರ್ಗೀಕರಿಸಲಾಗಿದೆ.

ಭೌತ ಸಂಸ್ಕೃತಿಯು (Material Culture) ಮಾನವನ ಎಲ್ಲ ಭೌತಿಕ ಸಂಪತ್ತನ್ನು ಪ್ರತಿನಿಧಿಸುವುದು. ಇದು ಮೂರ್ತ ಸ್ವರೂಪದ್ದು. ಕಣ್ಣಿಗೆ ಕಾಣುವಂತಹದು. ಸಾಂಕೇತಿಕವಾಗಿ ಇರುವಂತಹದು. ವಾಸ್ತವವಾದುದು, ನೈಜವಾದುದು (Realistic) ಆಗಿರುವುದು. ಮೂರ್ತವಾದ ಎಲ್ಲವೂ ಇದರ ಪಟ್ಟಿಯಲ್ಲಿ ಬರುತ್ತವೆ. ವಿಗ್ರಹ, ದೇವಾಲಯ, ಪೀಠೋಪಕರಣ, ರಥ, ವಾಹನ, ಯಂತ್ರ, ಕಟ್ಟಡ, ವಿಮಾನ ಇತ್ಯಾದಿಗಳೆಲ್ಲವೂ ಈ ಪಟ್ಟಿಯಲ್ಲಿ ಸೇರುತ್ತವೆ.

ಅಭೌತ ಸಂಸ್ಕೃತಿಯಲ್ಲಿ ಮಾನವನ ಎಲ್ಲ ಅಮೂರ್ತ ಅಂಶಗಳೂ ಸೇರುತ್ತವೆ. ಇದರಲ್ಲಿ ನಮ್ಮ ನಂಬಿಕೆ, ಆಚರಣೆ, ಭಾಷೆ, ಮೌಲ್ಯ, ಸಂಪ್ರದಾಯ, ಸಾಹಿತ್ಯ, ನೃತ್ಯ, ಸಂಗೀತ, ಅಭಿರುಚಿ, ಆಸಕ್ತಿ ಹವ್ಯಾಸಗಳು, ರಾಜಕೀಯ, ಆರ್ಥಿಕ, ಶೈಕ್ಷಣಿಕ ವಿಚಾರ, ಸಿದ್ಧಾಂತ, ತತ್ವಜ್ಞಾನಗಳು ಅಡಕವಾಗಿವೆ. ಇವು ಮನುಷ್ಯನ ಆಂತರಿಕ ಅಥವಾ ಸುಪ್ತ ಅಂಶಗಳು. ಇವುಗಳ ನೆರವಿನಿಂದ ಭೌತ ಸಂಸ್ಕೃತಿಯನ್ನೂ ರೂಪಿಸಬಹುದು. ಹಾಗೆಯೇ ಒಂದು ಮೂಲ ಭೌತ ಸಾಮಗ್ರಿಯನ್ನು ನೋಡದೆ ಮತ್ತೊಂದು ಭೌತ ಸಾಮಗ್ರಿಯನ್ನು ರಚಿಸಲು ವಿಚಾರಗಳು ಹೊಳೆಯುವುದಿಲ್ಲವೆಂದರೂ ತಪ್ಪಾಗಲಿಕ್ಕಿಲ್ಲ.

ಮನುಷ್ಯ ನಿರ್ಮಿಸುವುದೆಲ್ಲ ಸಂಸ್ಕೃತಿಯ ಭಾಗವಾಗುತ್ತದೆ. ವಸ್ತುಗಳನ್ನು ಉತ್ಪಾದಿಸಿ ಉಪಯೋಗಿಸುವ ಸಾಮರ್ಥ್ಯ ಪಡೆದುಕೊಂಡ ಮೇಲೆ ಮನುಷ್ಯನ ಸಂಸ್ಕೃತಿ ಪ್ರಾರಂಭವಾಯಿತು. ಈಗ ದೊರೆತಿರುವ ಮಾಹಿತಿಯನುಸಾರ ಸುಮಾರು ಹದಿನಾಲ್ಕು ದಶಲಕ್ಷ ವರ್ಷಗಳ ಹಿಂದೆ ಇದ್ದ ರಾಮಪಿಥೆಕಸ್ (Ramapithecus) ಗಳು ಅಂತಹ ಶಕ್ತಿ ಸಾಮರ್ಥ್ಯವನ್ನು ಹೊಂದಿರಲಿಲ್ಲ. ಆದರೆ ಸರಿಸುಮಾರು ಐದು ದಶಲಕ್ಷ ವರ್ಷಗಳ ಹಿಂದೆ ಭೂಮಿಯ ಮೇಲೆ ಎರಡು ಕಾಲುಗಳಿಂದ ನಡೆದಾಡುತ್ತಿದ್ದ ಆಸ್ಟಲೋಪಿತೆಕಸ್ (Austalopethecus) ಎಂದು ವಿಜ್ಞಾನಿಗಳು ಹೆಸರಿಸಿರುವ ಜೀವಿಗಳು

ಮೊಟ್ಟಮೊದಲ ಬಾರಿಗೆ ಕಲ್ಲಿನ ಆಯುಧಗಳನ್ನು ಉಪಯೋಗಿಸಿದವು. ಹೀಗೆ ಆಯುಧಗಳ ಬಳಕೆಯೇ ಸಂಸ್ಕೃತಿ ಮತ್ತು ನಾಗರೀಕತೆಯ ಉದಯಕ್ಕೆ ಕಾರಣವಾಯಿತು. ಇತಿಹಾಸಕಾರರು ಶಿಲಾಯುಗವನ್ನು; ಹಳೆಯ ಶಿಲಾಯುಗ (Palaeolithic Age)(ಕ್ರಿ.ಪೂ.ಸು. 2,50,000-ಕ್ರಿ.ಪೂ.ಸು. 1,00,000)
ಮಧ್ಯ ಶಿಲಾಯುಗ (Mesolithic Age) (ಕ್ರಿ.ಪೂ.ಸು. 9000-ಕ್ರಿ.ಪೂ.ಸು.7,000)
ನೂತನ ಶಿಲಾಯುಗ (Neolithic Age) (ಕ್ರಿ.ಪೂ.ಸು. 7000-ಕ್ರಿ.ಪೂ.ಸು.2,100)
ಎಂದು ವರ್ಗೀಕರಿಸುತ್ತಾರೆ.

ಭೌತ ಸಾಮಗ್ರಿಗಳ ರೂಪಿಸುವಿಕೆ ಮತ್ತು ಉಪಯೋಗವನ್ನು ಆಧರಿಸಿ ಮಾನವ ಸಂಸ್ಕೃತಿಯು ಐದಾರು ದಶಲಕ್ಷ ವರ್ಷಗಳ ಹಿಂದೆ ಹುಟ್ಟಿರಬಹುದು. ಎರಡು-ಮೂರು ದಶಲಕ್ಷ ವರ್ಷಗಳ ಹಿಂದೆ ಬೆಂಕಿಯ ಉಪಯೋಗವನ್ನು ಮಾನವ ಕಂಡುಕೊಂಡ. ಹತ್ತು ಲಕ್ಷ ವರ್ಷಗಳ ಹಿಂದೆ ನಿಯಾಂಡರ್ತಲ್ (Neanderthal) ಮನುಷ್ಯ ಎಲುಬಿನಿಂದ ಆಯುಧಗಳನ್ನು, ವಸ್ತುಗಳನ್ನು ಮಾಡಿ ಉಪಯೋಗಿಸುತ್ತಿದ್ದ. ಇವರು ಸತ್ತವರನ್ನು ಸಮಾಧಿ ಮಾಡುವುದನ್ನು ಪ್ರಾರಂಭಿಸಿದರು.

ಸುಮಾರು 25,000 ವರ್ಷಗಳ ಹಿಂದೆ ಕ್ರೊ-ಮ್ಯಾಗ್ನನ್ (Cro-Magnon) ಮನುಷ್ಯನು ಕಾಣಿಸಿಕೊಂಡನು. ಇವರು ಗವಿಗಳಲ್ಲಿ ಚಿತ್ರಗಳನ್ನು ಬಿಡಿಸುತ್ತಿದ್ದರು. ಕಪ್ಪೆ ಚಿಪ್ಪುಗಳು, ಪ್ರಾಣಿಗಳ ದಂತಗಳಿಂದ, ಮೀನಿನ ಮೂಳೆಗಳಿಂದ ಒಡವೆಗಳನ್ನು ತಯಾರಿಸಿಕೊಳ್ಳುತ್ತಿದ್ದರು. ತೊಗಟೆಗಳನ್ನು ಮತ್ತು ಚರ್ಮವನ್ನು ಹೊದ್ದುಕೊಳ್ಳುತ್ತಿದ್ದರು. ಸೂಜಿಗಳಿಂದ ಹೆಣಿಗೆ ಮಾಡುತ್ತಿದ್ದರು. ಇವರು ಆಧುನಿಕತೆ ಬೆಳೆಸಿಕೊಳ್ಳಲು ಮತ್ತೆ ಹಲವು ಸಹಸ್ರ ವರ್ಷಗಳು ಬೇಕಾದವು.

ಇಲ್ಲಿಂದ ಮುಂದೆ ಮನುಷ್ಯನ ಸಂಸ್ಕೃತಿ ಬೆಳೆದು ನಿಂತಿದ್ದೇ ಲೋಹಗಳಿಂದಾಗಿ. ಆಧುನಿಕ ಸಂಸ್ಕೃತಿ ಪ್ರಾರಂಭವಾಗಿದ್ದು ಲೋಹಗಳಿಂದ. ಕಲ್ಲುಗಳ ಸ್ಥಾನದಲ್ಲಿ ಮಾನವನು ಲೋಹವನ್ನು ಬಳಸತೊಡಗಿದ ಕಾಲಕ್ಕೆ ಆಧುನಿಕ ನಾಗರೀಕತೆ-ಸಂಸ್ಕೃತಿ ಪ್ರಾರಂಭವಾಯಿತು. ಲೋಹಗಳನ್ನು ಸಂಸ್ಕರಿಸಿದ್ದು ಮತ್ತು ಲೋಹದ ಆಯುಧಗಳನ್ನು ಉಪಯೋಗಿಸತೊಡಗಿದ್ದು ನೂತನ ಸಂಸ್ಕೃತಿ-ನಾಗರೀಕತೆಯ ಉದಯಕ್ಕೆ ನಾಂದಿ ಹಾಡಿತು.

ಕೂಡತಿ, ಕೊಡಲಿಯ ಹಿಡಿ ಮುಂತಾದವುಗಳಿಂದಾಗಿ ಅಲ್ಲದೆ ಮನೆಗಳನ್ನು

ಕಟ್ಟುವ ಸಲುವಾಗಿಯೂ ಮರವನ್ನು ನೂತನ ಶಿಲಾಯುಗದ ಜನರು ಉಪಯೋಗಿಸ ತೊಡಗಿದರು. ರಾಮಾಯಣ ಮತ್ತು ಮಹಾಭಾರತಗಳು ರಥಗಳ ವಿವರಗಳನ್ನು ನೀಡುತ್ತವೆ. ಆಗ್ಗೆ ಮರವನ್ನು ಉಪಯೋಗಿಸಿ ರಥ, ಸಭಾಗೃಹ, ಬಿಲ್ಲು, ಬಾಣಗಳನ್ನು ನಿರ್ಮಿಸಲಾಗುತ್ತಿತ್ತು. ಶಿಲಾಯುಗ ಮುಗಿದ ಮೇಲೆ ಮಾನವ ಲೋಹ ಯುಗಕ್ಕೆ ಪಾದಾರ್ಪಣ ಮಾಡಿದ.

ಲೋಹ ಯುಗದಲ್ಲಿ ಚಾಲ್ಕೋಲಿಥಿಕ್ ಯುಗ (ಕ್ರಿ.ಪೂ.ಸು. 2100-ಕ್ರಿ.ಪೂ. 1500) ಮೊದಲಿನದು. ಈ ಕಾಲದಲ್ಲಿ ಚಿನ್ನವನ್ನು ಕಂಡು ಹಿಡಿಯಲಾಯಿತು. ಮೆಸಪಟೋಮಿಯದ ಚಾಲ್ಡಿಯನ್ ಶಾಸನವು ಚಿನ್ನವನ್ನು ಭಾರತದಿಂದ ತರಲಾಗುತ್ತಿತ್ತೆಂದು ವಿವರಿಸಿ ಹೇಳುತ್ತದೆ. ಚಿನ್ನವನ್ನು ಶೋಧಿಸುವ ಹಿರಣ್ಯಕಾರರು ಆಭರಣಗಳನ್ನು ತಯಾರಿಸತೊಡಗಿದರು. ಇದೇ ಅವಧಿಯಲ್ಲಿ ಹರಪ್ಪದಲ್ಲಿ ತಾಮ್ರದ ಉಪಕರಣಗಳನ್ನು ಉಪಯೋಗಿಸುತ್ತಿದ್ದರು. ಗಣೇಶ್ವರ ಎಂಬಲ್ಲಿಂದ ಹರಪಕ್ಕೆ ತಾಮ್ರದ ಉಪಕರಣಗಳು ಸರಬರಾಜಾಗುತ್ತಿದ್ದವು. ನಗರಗಳಲ್ಲಿ ಒಂಬತ್ತು ಭಾಗ ತಾಮ್ರ ಮತ್ತು ಒಂದು ಭಾಗ ತವರ ಸೇರಿಸಿ ಮಾಡಿದ ಕಂಚನ್ನು ಬಳಸಲಾಗುತ್ತಿತ್ತು. ಕಂಚುಗಾರರು ಕಂಚಿನ ಪಾತ್ರೆ, ತಟ್ಟೆ ಕನ್ನಡಿಗಳನ್ನು ತಯಾರಿಸಿ ಮಾರುತ್ತಿದ್ದರು.

ತಾಮ್ರಯುಗದ ನಂತರ ಕಬ್ಬಿಣದ ಯುಗ (Iron Age) ಪ್ರಾರಂಭವಾಯಿತು. ಕ್ರಿ.ಪೂ. ಸುಮಾರು 1000 ದಿಂದ ಕಬ್ಬಿಣದ ಸಂಸ್ಕಾರ ಮತ್ತು ಬಳಕೆಯಾಗತೊಡಗಿತು. ಅಕ್ರೂಂಜಿಖೇರ ಎಂಬ ಸ್ಥಳದಲ್ಲಿ ಕಬ್ಬಿಣ ಯುಗ ಆರಂಭದ ಕುರುಹುಗಳು ದೊರೆತಿವೆ. ದಕ್ಷಿಣ ಭಾರತದ ತಿನ್ನೆವೆಲ್ಲಿ ಜಿಲ್ಲೆಯ ಆದಿಚ್ಚನಲ್ಲೂರಿನಲ್ಲಿ ಕಬ್ಬಿಣ ಯುಗದ ಅವಶೇಷಗಳು ದೊರೆತಿವೆ. ಚಂಗಲ್ ಪೇಟೆ ಜಿಲ್ಲೆಯ ಪೆರಂಭೂರಿನಲ್ಲಿಯೂ ಕೂಡಾ ಕಬ್ಬಿಣ ಉಪಕರಣಗಳು ದೊರೆತಿವೆ.

ಕಬ್ಬಿಣವನ್ನು ಬಾಣಗಳಿಗೆ, ಚಕ್ಕಡಿ-ರಥಗಳಿಗೆ, ಆಯುಧಗಳ ತಯಾರಿಕೆಗೆ ಉಪಯೋಗಿಸತೊಡಗಿದಂತೆ ಅವುಗಳಲ್ಲಿ ಪರಿಣತರಾದ ಕಮ್ಮಾರರು ಹಳ್ಳಿಹಳ್ಳಿಗೆ ಹೋಗಿ ಕೆಲಸ ಮಾಡತೊಡಗಿದರು. ಹೀಗೆ ನಾಗರೀಕತೆ ಅರಳಲು ಮರ, ಚಿನ್ನ, ತಾಮ್ರ, ಕಂಚು, ಹಿತ್ತಾಳೆ, ಕಬ್ಬಿಣಗಳ ಬಳಕೆ ಮಾಡಿಕೊಂಡಿದ್ದು ಬಹು ಮುಖ್ಯ ಕಾರಣವಾಗಿದೆ.

ಹೀಗೆ ನಾಣ್ಯ, ರಥ, ಆಯುಧ, ಯುದ್ಧಾಸ್ತ್ರ, ದುರ್ಗ, ಕೋಟೆ, ಕೊತ್ತಳ, ಸಭಾಭವನ, ವಾಹನ, ವಿಮಾನ, ನೌಕೆ ಮುಂತಾದವುಗಳನ್ನು ನಿರ್ಮಿಸುತ್ತಿದ್ದ

ವಿಶ್ವಕರ್ಮ ಬ್ರಾಹ್ಮಣರು ಅನ್ಯಮತೀಯರು ಭಾರತಕ್ಕೆ ಬಂದು ಆಕ್ರಮಣ ಮಾಡುವವರೆಗೂ ಅಸ್ತಿತ್ವದಲ್ಲಿದ್ದ ರಾಜ್ಯಗಳಲ್ಲಿ ರಾಜ್ಯಭಾರ ಮಾಡುತ್ತಾ, ಅರಸೊತ್ತಿಗೆಗಳಲ್ಲಿ ಪ್ರಮುಖ ಪಾತ್ರವನ್ನು ನಿರ್ವಹಿಸುತ್ತಾ ವಿಜ್ಞಾನ ಮತ್ತು ತಂತ್ರಜ್ಞಾನದ ಪ್ರವರ್ತಕರಾಗಿ ವೈಭವದ ನಾಗರೀಕತೆಯನ್ನು ನಿರ್ಮಿಸಿದರು. ಆಕ್ರಮಣಕಾರರ ಆಕ್ರಮಣಾನಂತರ ಹಿಂದೂ ಅರಸೊತ್ತಿಗೆಗಳೆಲ್ಲಾ ಒಂದೊಂದಾಗಿ ಕಣ್ಮರೆಯಾಗ ತೊಡಗಿದವು. ಹಿಂದೂಗಳಿಗೆ ನಿರ್ಗತಿ ಬಂದೊದಗಿತು. ಹಿಂದೂ ಸಮಾಜ ತನ್ನ ದುರಂತದ ಬಾಗಿಲನ್ನು ತಾನೇ ತಟ್ಟಿತು. ಮೇಲಿಂದ ಮೇಲೆ ನಡೆದ ಆಕ್ರಮಣಗಳು ಸಮಾಜವನ್ನು ಜರ್ಜರಿತಗೊಳಿಸಿದವು. ಮುಂದೆ ಯುರೋಪಿಯನ್ನರ ಆಗಮನ, ಪಾಶ್ಚಿಮಾತ್ಯ ವೈಜ್ಞಾನಿಕ ಕ್ರಾಂತಿ ಇವೆಲ್ಲ ಹಿಂದೂ ಸಮಾಜದ ಮೇಲೆ ಏನೆಲ್ಲ ಪರಿಣಾಮಗಳನ್ನು ಮಾಡಿದವು. ಈ ವೇಳೆಗೆ ಎಷ್ಟೋ ಜನ ಉಳ್ಳವರು ನಿರ್ಗತಿಕರಾದರು. ಒಂದು ಕಾಲಕ್ಕೆ ಬುದ್ಧಿವಂತ ಆಗಿದ್ದ ಸಮೂಹಗಳು ಬೀದಿಗೆ ಬಿದ್ದವು. ಇಂದು ಪಾಶ್ಚಿಮಾತ್ಯ ಸಂಸ್ಕೃತಿಯನ್ನು ಸ್ವೀಕರಿಸಿರುವ ಭಾರತ ತನ್ನ ಧರ್ಮ, ಕಲೆ, ಮೌಲ್ಯಗಳನ್ನು ಗಾಳಿಗೆ ತೂರುವ ಮುನ್ನ ಎಚ್ಚೆತ್ತುಕೊಂಡು ಹಿಂದೂ ಸಂಸ್ಕೃತಿ-ನಾಗರೀಕತೆಯ ಹಲವು ಅಂಶಗಳನ್ನು ಆಧುನಿಕತೆ ಅತ್ಯಾಧುನಿಕತೆಯೊಂದಿಗೆ ಉಳಿಸಿಕೊಂಡರೆ ಮಾನಸಿಕ ಶಾಂತಿಯ ಜೊತೆಗೆ ಸಾಮಾಜಿಕ ಸಾಮರಸ್ಯ ಮತ್ತು ಭೌತಿಕ ಉತ್ಕರ್ಷ ಆಗುವುದರಲ್ಲಿ ಯಾವುದೇ ಸಂಶಯವಿಲ್ಲ. ಇಂತಹ ಕಾರ್ಯಕ್ಕೆ ಅನುಭವಿಗಳು ಪ್ರೋತ್ಸಾಹಿಸಬೇಕು ಹಾಗೂ ಯುವಕರು ಮುಂದಾಗಬೇಕು.

ಕಬ್ಬಿಣ, ಮರ, ಕಂಚು (ತಾಮ್ರ-ಹಿತ್ತಾಳೆ), ಶಿಲೆ, ಚಿನ್ನ (ಬೆಳ್ಳಿ, ವಜ್ರ, ಹರಳು, ಮಣಿಗಳು, ಪಚ್ಚೆ, ರತ್ನ ಇತ್ಯಾದಿ) ಇವುಗಳನ್ನು ಉಪಯೋಗಿಸಿ ಕೆಲಸ ಮಾಡುವ ವಿದ್ಯೆಯನ್ನು ವಿಶ್ವಕರ್ಮ ಬ್ರಾಹ್ಮಣರು ಪ್ರಾಚೀನ ಕಾಲದಿಂದ ರೂಢಿಸಿಕೊಂಡು ಬಂದಿದ್ದಾರೆ. ಇವೆಲ್ಲವುಗಳಿಗೂ 'ಶಿಲ್ಪ' ಎಂದೇ ಕರೆಯುತ್ತೇವೆ. ಇವುಗಳನ್ನು ಉಪಯೋಗಿಸಿಕೊಂಡು ಕಲಾತ್ಮಕತೆಯನ್ನು ಚತುರ ಶಿಲ್ಪಿಯು ಅರಳಿಸುತ್ತಾನೆ. ಅದಕ್ಕಾಗಿ ಅವನು ತನ್ನೆಲ್ಲಾ ಗಮನ ಹರಿಸುತ್ತಾನೆ. ಈ ವೃತ್ತಿಗಳನ್ನು ಶಿಲ್ಪಿಗಳು ಪ್ರಾಚೀನ ಕಾಲದಿಂದಲೂ ಹೆಚ್ಚು ಶ್ರದ್ಧೆ ಮತ್ತು ತಾಳ್ಮೆಯಿಂದ ನಿರ್ವಹಿಸುತ್ತಾ ಬಂದಿದ್ದಾರೆ. ಯಾವುದೇ ದೇವಾಲಯಗಳಲ್ಲಿ ಈ ಎಲ್ಲ ಶಿಲ್ಪಗಳೂ ಇರುವುದನ್ನು ಕಾಣಬಹುದು. ಇಂತಹ ಶಿಲ್ಪಗಳಿಂದ ಹಿಂದೂ ಧರ್ಮ ಉಳಿದಿದೆ. ಹಿಂದೂಗಳ ಬದುಕಿನ ಮೂಲ ಪ್ರೇರಣೆಯೇ ಧರ್ಮವಾಗಿದೆ. ''ಧರ್ಮೋ ರಕ್ಷತಿ ರಕ್ಷಿತಃ''. ಮಹಾತ್ಮಾ ಗಾಂಧಿ

ಹೇಳುವಂತೆ "Religion is no religion if it becomes Mechanical." ಆದ್ದರಿಂದ ಕಲಾತ್ಮಕವಾಗಿರುವ ಧರ್ಮವು ಶ್ರೇಷ್ಠವಾದುದು.

ಶಿಲ್ಪವು ಕಲೆಯೂ ಹೌದು, ವಿಜ್ಞಾನವೂ ಹೌದು. ಬುದ್ಧಿಯ ಜೊತೆಗೆ ಮನಸ್ಸೂ ಕೂಡಾ ಶಿಲ್ಪಕ್ಕಾಗಿ ಕೆಲಸ ಮಾಡುತ್ತದೆ. ಕಬ್ಬಿಣ, ತಾಮ್ರ, ಹಿತ್ತಾಳೆ, ಕಂಚು, ಚಿನ್ನ, ಬೆಳ್ಳಿ ಮುಂತಾದ ಲೋಹಗಳ ಶಿಲ್ಪವು ಲೋಹಶಿಲ್ಪ. ಮರದಿಂದ ಮಾಡಿದ ಶಿಲ್ಪವು ಕಾಷ್ಠ ಶಿಲ್ಪ ಮತ್ತು ಶಿಲೆಯಲ್ಲಿ ತಯಾರಿಸಿದ್ದು ಶಿಲಾ ಶಿಲ್ಪ ಎನಿಸುವುದು. ಇವುಗಳಿಗೆ ಸಂಬಂಧಿಸಿದ ಜ್ಞಾನವನ್ನು ಬಹಳ ಕಾಲದಿಂದಲೂ ಕಲಿಸುತ್ತಾ ಬಂದವರು ಆಚಾರ್ಯರೆನಿಸಿದ್ದಾರೆ. ಇಂತಹ ವಿದ್ಯೆಗಳು ಕಠಿಣವೂ, ಪರಿಶ್ರಮದಿಂದ ಕೂಡಿದವೂ. ಉನ್ನತ ಬುದ್ಧಿಮತ್ತೆಯ ಅವಶ್ಯಕತೆಯುಳ್ಳವೂ ಆಗಿದ್ದರಿಂದ ಹೆಚ್ಚಿನ ಸಂಖ್ಯೆಯ ಜನರು ಇವುಗಳನ್ನು ಕಲಿಯಲು ಮುಂದೆ ಬರುತ್ತಿರಲಿಲ್ಲ. ಅಲ್ಲದೆ ಈ ಜ್ಞಾನವು ವೈದಿಕ ಸಮ್ಮತವೂ, ಶಾಸ್ತ್ರಬದ್ಧವೂ ಆಗಿದ್ದರಿಂದ ಹೆಚ್ಚಿನ ನಿಷ್ಠೆಯ ಅವಶ್ಯಕತೆ ಹೊಂದಿದ್ದವು. ಇಂತಹ ವೃತ್ತಿಗಳು ತಂದೆಯಿಂದ ಮಕ್ಕಳಿಗೆ ಸುಲಭವಾಗಿ ವರ್ಗವಾಗುತ್ತಾ ಬಂದಿವೆ.

ಎಡ್ವರ್ಡ್ ಯಂಗ್‌ರವರು ಹೇಳಿರುವಂತೆ ಪ್ರಕೃತಿಯ ಚಲನೆಯು ದೇವರ ಕಲೆಯಾಗಿದೆ . (Edward young - The course of Nature is the Art of God) . ಪ್ರಕೃತಿ ದೇವರ ಕಲೆಯಾದರೆ ಶಿಲ್ಪ ಕಲೆಯು ಪ್ರಕೃತಿಯ ಅನುಕರಣೆಯಾಗಿದೆ. ಶಿಲ್ಪ ಕಲೆಯನ್ನು ಅರಳಿಸುವಲ್ಲಿ ಶಿಲ್ಪಿ ಎಷ್ಟರ ಮಟ್ಟಿಗೆ ಕಾರಣ ಕರ್ತನೋ ಸಮಾಜವೂ ಕೂಡಾ ಅದರ ಬೆಳವಣಿಗೆಗೆ ಅಷ್ಟೇ ಕಾರಣೀ ಭೂತವಾಗಿದೆ. ಹಿಂದೂ ಸಮಾಜದ ಉದ್ದಗಲಕ್ಕೂ ವ್ಯಾಪಿಸಿರುವ ದೇವಾಲಯಗಳು, ವಿಗ್ರಹಗಳು ಶಿಲ್ಪ ಕಲೆಗಳು ಸಮಸ್ತ ಹಿಂದೂಗಳ ಆಸ್ತಿಯಾಗಿವೆ. ಪ್ರಪಂಚಕ್ಕೆ ಮಾದರಿ ಎನಿಸಬಹುದಾದ ಶಿಲ್ಪಕಲೆಯನ್ನು ಹೊಂದಿರುವ ಈ ಸಮಾಜದ ಜನರು ನಿಜಕ್ಕೂ ಧನ್ಯರು.ಇವುಗಳನ್ನು ಉಳಿಸಿ ಬೆಳೆಸಿಕೊಳ್ಳುವ ಮೂಲಕ ಜನರು ತಮ್ಮನ್ನು ತಾವೇ ಗೌರವಿಸಿಕೊಳ್ಳುತ್ತಿದ್ದಾರೆ. ಶಿಲ್ಪ ಕಲೆಯುಳ್ಳ ಸಂಸ್ಕೃತಿಯು ಅರ್ಥ ಪೂರ್ಣವಾದುದು.

ಭಾರತೀಯ ಶಿಲ್ಪಕಲೆಯು ಧಾರ್ಮಿಕ ನಂಬಿಕೆ ಮತ್ತು ತಾತ್ವಿಕ ಅಂಶಗಳಿಂದ ಪ್ರಭಾವಿತವಾಗಿದೆ. ದಕ್ಷಿಣದ ದೇವಾಲಯಗಳು, ಅಜಂತ, ಎಲ್ಲೋರ, ಖಜುರಾಹೋದ ಗುಹಾ ದೇವಾಲಯಗಳು ಭಾರತೀಯ ಶಿಲ್ಪಗಳ ಜೀವಂತ ಕಲೆಗೆ ಉದಾಹರಣೆಗಳು.

ಸಹಸ್ರಾರು ವಿದೇಶಿಯರು ರಚನೆಯ ತಂತ್ರಗಳ ಅಧ್ಯಯನಕ್ಕಾಗಿಯೇ ಆಗಮಿಸುತ್ತಾರೆ. ಬೇಲೂರು, ಹಳೇಬೀಡು, ಶ್ರವಣ ಬೆಳಗೊಳ, ಹಂಪೆ, ಪಟ್ಟದಕಲ್ಲು, ಬಾದಾಮಿ, ಐಹೊಳೆಯ ದೇವಾಲಯಗಳು ಮತ್ತು ರಥಗಳು, ನಮ್ಮ ಶಿಲ್ಪಿಗಳ , ಚಾಕಚಕ್ಯತೆ, ಶ್ರಮ, ಕೌಶಲ್ಯವನ್ನು ಕಂಡು ನಿಬ್ಬೆರಗಾಗುವಂತೆ ಮಾಡುತ್ತವೆ.

ಡಾ ॥ ಕೆ.ಪಿ. ಈರಣ್ಣನವರು "ಶಾಸನಗಳಲ್ಲಿ ವಿಶ್ವಕರ್ಮರು" ಎಂಬ ತಮ್ಮ ಕೃತಿಯಲ್ಲಿ(1999) ಈ ಒಂದು ಮಾತನ್ನು ಹೇಳಿದ್ದಾರೆ. "ಕರ್ನಾಟಕದ ಶಾಸನಗಳಲ್ಲಿ ಸಾವಿರಾರು ಶಿಲ್ಪಿಗಳ ಹೆಸರುಗಳು ದೊರೆಯುತ್ತವೆ. ವಿಗ್ರಹಗಳನ್ನು ಕೆತ್ತುವವರೂ, ದೇವಾಲಯಗಳನ್ನು ಮಾಡುವವರೂ ಶಿಲ್ಪಿಗಳು. ಈ ಶಿಲ್ಪಿಗಳು ವಿಶ್ವಕರ್ಮರೇ ಆಗಿದ್ದು ಪ್ರತ್ನಸ ಗೋತ್ರದ ಜನರೇ ಆಗಿದ್ದರೂ ಇತರ ನಾಲ್ಕು ಗೋತ್ರಗಳ ಜನರೂ ಸಹ ಈ ಕೆಲಸವನ್ನು ಮಾಡಿದ್ದಾರೆ. ಈ ಶಿಲ್ಪಿಗಳ ಹೆಸರುಗಳು ಕ್ವಚಿತ್ತಾಗಿ ಶಾಸನಗಳ ಕೊನೆಯಲ್ಲಿ ದೊರೆಯುತ್ತವೆ. ವಿಶ್ವಕರ್ಮರು ಧರ್ಮಭೀರುಗಳು. ತಮ್ಮ ಹೆಸರುಗಳನ್ನು ಲೌಕಿಕ ಕೀರ್ತಿಗಾಗಿ ಕೆತ್ತಿ ಪ್ರಕಟಪಡಿಸುವುದು ಅಧರ್ಮವೆಂದು ತಿಳಿಯುತ್ತಿದ್ದರು. ಆದ್ದರಿಂದ ಆರಂಭದಲ್ಲಿ ಇವರ ಹೆಸರುಗಳು ದೊರೆಯದಿದ್ದರೂ ಬಾದಾಮಿ ಚಾಲುಕ್ಯರ ಕಾಲಕ್ಕೆ ಬಂದಾಗ ಶಿಲ್ಪಿಗಳ ಹೆಸರುಗಳು ದೊರೆಯಲಾರಂಭವಾಗುತ್ತವೆ. ಅದರಲ್ಲೂ ಚಪಡ, ವಿಶ್ವಕರ್ಮ, ನರವರ, ದಾಮಕೀರ್ತಿ, ಬೋಜಕನ ನಂತರದಲ್ಲಿ ಚಾಲುಕ್ಯರ ಪ್ರಸಿದ್ಧ ಶಿಲ್ಪಿಗಳಾದ ಶ್ರೀ ಗುಂಡನ ಅನಿವಾರಿತಾಚಾರಿ, ಶ್ರೀ ಸರ್ವಸಿದ್ಧಿ ಆಚಾರಿ, ರೇವಡಿ ಓವಜ, ನರಸೋಜ ಪ್ರಮುಖರಾಗಿದ್ದಾರೆ. ಅನಂತರದ ಕಾಲದಲ್ಲಿ ವಿಶ್ವಕರ್ಮಾಚಾರ್ಯ, ವಿಕ್ರಮಾದಿತ್ಯನ್, ಪುಲಿಗೆರೆಯ ಭಮ್ಮೋಜ (ಬ್ರಹ್ಮೋಜ), ಇಕ್ಕುಡಾಚಾರಿ, ಮಲ್ಲೋಜ, ಮಣಿಯೋಜ, ಬಳ್ಳಿಗಾವೆಯ ದಾಸೋಜ, ನಾಗೋಜ, ಗಂಗಾಚಾರಿ, ವರ್ಧಮಾನಾ ಚಾರಿ, ಮಾಬಿ, ಕೇದಾರೋಜ, ಕಾಳಿದಾಸಿ, ದ್ರೋಣ ಘರಟ್ರಾಚಾರಿ, ತಿಪ್ಪಣ್ಣೋಜ, ರೂವಾರಿ ಮಲ್ಲಿತಮ್ಮ, ಹೆನೋಜ, ನಂದಿಯ ಬೈಚೋಜ ಮುಂತಾದವರನ್ನು ಹೆಸರಿಸಬಹುದು."

ಆಧುನಿಕ ಕಾಲದಲ್ಲಿಯೂ ಸಮಾಜದ ಒತ್ತಾಸೆಯೊಂದಿಗೆ, ಸರ್ಕಾರದ ಪ್ರೋತ್ಸಾಹದೊಂದಿಗೆ ಅನೇಕ ಶಿಲ್ಪಿಗಳು ತಮ್ಮ ಶಿಲ್ಪ ಕಲಾ ಪ್ರತಿಭೆಯನ್ನು ಧಾರೆ ಯೆರೆಯುತ್ತಿದ್ದಾರೆ. ಶ್ರೀಮಾನ್ ಪಿ.ಆರ್. ತಿಪ್ಪೇಸ್ವಾಮಿಯವರು ಆಧುನಿಕ ಕಾಲದ ಕರ್ನಾಟಕದ ದೊಡ್ಡ ಶಿಲ್ಪ ಕಲಾ ಸಮುದಾಯದ ಕುರಿತಾಗಿಯೇ "ಶಿಲ್ಪಿ ಸಂಕುಲ" (1996) ಎಂಬ ಕೃತಿಯನ್ನು ಬರೆದಿದ್ದು ಅಂತಹ ಶಿಲ್ಪಿಗಳ ಹೆಸರುಗಳನ್ನು ಇಲ್ಲಿ ಸ್ಮರಿಸುವುದು

ಉಚಿತವೆನಿಸುತ್ತದೆ. ಅಂತಹ ಶಿಲ್ಪಿಗಳ ಪರಂಪರೆ ಹೀಗೆ ಪ್ರಾರಂಭವಾಗುತ್ತದೆ. ಮೈಸೂರಿನ ಶಿಲ್ಪ ಸಿದ್ಧಾಂತಿ ಶ್ರೀ ಸಿದ್ಧಲಿಂಗ ಸ್ವಾಮಿಗಳು, ಕೆ. ವೆಂಕಟಪ್ಪ, ಸ್ವರ್ಣಕಲಾ ನಿಪುಣ ಸಿಂಗಣ್ಣಚಾರ್ಯ, ಆರ್. ಎಸ್. ನಾಯ್ಡು ಪ್ರಬುದ್ಧ ಶಿಲ್ಪಿ ಎನ್. ನಾಗೇಂದ್ರ ಸ್ಥಪತಿ, ಶಿಲ್ಪ ಸಿದ್ಧಾಂತಿ ಮಹಾದೇವ ಸ್ವಾಮಿಗಳು, ರಜತಕಲಾ ಪ್ರವೀಣ ಅಂಕಪ್ಪಾಚಾರ್ಯ, ಅಪ್ರತಿಮ ಲೋಹಶಿಲ್ಪಿ ಎನ್.ವಿ. ಚಿನ್ನಾಚಾರ್ಯ, ಬೆಳ್ಳಿ ರಥದ ಅಪೂರ್ವ ಶಿಲ್ಪಿ ಡಿ.ವಿ. ಸುಬ್ಬಣ್ಣಾಚಾರ್ಯ, ಕರ್ನಾಟಕದ ಖ್ಯಾತ ಕಾಷ್ಠ ಶಿಲ್ಪಿ ಎಸ್. ನರಸಿಂಹಾಚಾರ್ಯ, ಮಾನ ಶಿಲ್ಪರತ್ನ ಎನ್. ಎಂ. ಕೆ. ಆಚಾರ್ಯ, ನಿಷ್ಠೆಯ ಕಲಾವಿದ ಲಿಂಗಾಚಾರ್ಯ, ಬಿ. ಎನ್. ರಾಮ್‌ಚಂದ್ರಪ್ಪ, ಶಿಲ್ಪಾಚಾರ್ಯ ಬಿ. ಬಸವಣ್ಣ ಖ್ಯಾತ ದಂತ ಶಿಲ್ಪಿ ಎಚ್. ವೆಂಕಪ್ಪ, ಶಿಲ್ಪಿ ಚತುರ ಸಿ. ಸಿದ್ಧಲಿಂಗಯ್ಯ, ಖ್ಯಾತ ಶಿಲ್ಪಿ ಮೀರ್ ಶೌಕತ್ಅಲಿ, ಕಡಲ ತೀರದ ಅಪೂರ್ವ ಶಿಲ್ಪಿ ಎಂ. ಶ್ರೀನಿವಾಸಾಚಾರ್ಯ, ಅಮರ ಶಿಲ್ಪಿ ದೇವಲಕುಂದ ವಾದಿರಾಜ್, ಸಿ. ಪರಮೇಶ್ವರಾಚಾರ್ಯ ಮುಂತಾದವರ ಸಾಲಿಗೆ ಸೇರ್ಪಡೆಗೊಳ್ಳಬಹುದಾದ ಹೆಸರು ಎಂ.ಪರಮೇಶ್ವರಾಚಾರ್ಯ ಅವರದು. ಇವರ ಸಾಲಿಗೆ ಸೇರುವ ಇತ್ತೀಚಿನ ಇನ್ನಿತರ ಶಿಲ್ಪಿಗಳೆಂದರೆ ಕಾರ್ಕಳದ ಶಿಲ್ಪಿ ಕೆ. ಶಾಮರಾಯಾಚಾರ್ಯ, ರೂಪಶಿಲ್ಪಿ ಧನಂಜಯ ಶಿಲ್ಪಿ ರಂಜಾಳ ಗೋಪಾಲ ಶೆಣೈ, ರೂಪಶಿಲ್ಪಿ ಬಿ. ಬಸವಯ್ಯ, ದೇವನಹಳ್ಳಿ ಎ. ಸಿ. ಎಚ್. ಆಚಾರ್ಯ, ಶಿಲ್ಪಕಲಾ ಚತುರ ಎನ್.ಜಿ. ನೀಲಕಂಠಾಚಾರ್, ಅಭಿನವ ಜಕ್ಕಣ್ಣ ಶಿಲ್ಪಿ ನಾಗಲಿಂಗಾಚಾರ್ಯ ಮುಂತಾದವರು. ಪ್ರಸ್ತುತ ಎಂ. ಪರಮೇಶ್ವರಾಚಾರ್ಯರು ರಥಶಿಲ್ಪಿ ಎಂದೇ ಗುರುತಿಸಲ್ಪಟ್ಟಿದ್ದಾರೆ. ಇವರು ಇತರ ಎಲ್ಲ ಶಿಲ್ಪ ಪ್ರಕಾರಗಳಲ್ಲಿ ಕೈಯಾಡಿಸಿ ತಮ್ಮ ಅಸಾಧಾರಣ ಪ್ರತಿಭೆಯನ್ನು ಹೊರಹೊಮ್ಮಿಸಿ ನಾಡನ್ನೇ ನಿಬ್ಬೆರಗಾಗುವಂತೆ ಮಾಡಿದ್ದಾರೆ. ಅವರ ಬಾಲ್ಯ, ಜೀವನ, ಶಿಲ್ಪ ಸಾಧನೆಗಳು ಮತ್ತು ಪಡೆದ ಗೌರವ-ಪ್ರಶಸ್ತಿಗಳ ವಿವರ ಈ ರೀತಿ ಇದೆ.

## ಬಾಲ್ಯ-ಜೀವನ

ಗಂಡು ಮೆಟ್ಟಿನ ನಾಡಾದ ಚಿತ್ರದುರ್ಗ ಜಿಲ್ಲೆಯ ಪರಿಚಯ ಯಾರಿಗಿಲ್ಲ? ವಿಜಯನಗರದ ಅರಸರ ಆಡಳಿತ ವ್ಯಾಪ್ತಿಗೊಳಪಟ್ಟಿದ್ದ ಮದಕರಿ ನಾಯಕ ವಂಶಸ್ಥರಿಂದ ಆಳಲ್ಪಟ್ಟ ದುರ್ಗವು ಅನೇಕ ಮಹನೀಯರಿಗೆ ಜನ್ಮಕೊಟ್ಟ ನಾಡು. ಇಂತಹ ಜಿಲ್ಲೆಯ ಪ್ರಮುಖ ತಾಲ್ಲೋಕೊಂದಾದ ಹೊಳಲ್ಕೆರೆಯ ನೂಲೇನೂರು ಎಂಬ ಗ್ರಾಮದಲ್ಲಿ ವಂಶ ಪಾರಂಪರ್ಯವಾಗಿ ಶಿಲ್ಪವನ್ನು ನಿರ್ವಹಿಸುತ್ತಿದ್ದ ಪ್ರತ್ನಸ ಗೋತ್ರದ ಮಾನಾಚಾರ್ಯ

ಎಂಬ ಶಿಲ್ಪಿ ಇದ್ದರು. ಅವರು ತಮ್ಮ ಶಿಲ್ಪ ಕಲೆಯಿಂದಾಗಿ ಅರಮನೆಗಳವರೆಗೂ ಖ್ಯಾತಿಯನ್ನು ಬೆಳೆಸಿಕೊಂಡಿದ್ದರು. ಇವರ ಪತ್ನಿ ವೀರಮ್ಮ ಎಂಬ ಸದ್ಗೃಹಿಣಿ. ದೈವ ಭಕ್ತರಾದ ಈ ದಂಪತಿಗಳ ಉದರದಲ್ಲಿ ದಿನಾಂಕ 24-06-1924 ರಂದು ಪರಮೇಶ್ವರರು ಜನಿಸಿದರು. ಇವರ ಇಡೀ ಮನೆತನವೇ ಶಿಲ್ಪಿಗಳ ಮನೆತನವಾಗಿದ್ದು ಇವರ ತಂದೆ, ತಾತ, ಚಿಕ್ಕಪ್ಪ, ದೊಡ್ಡಪ್ಪಂದಿರೆಲ್ಲ ವಿವಿಧ ಶಿಲ್ಪಗಳಲ್ಲಿ ತಮ್ಮನ್ನು ತೊಡಗಿಸಿಕೊಂಡಿದ್ದರು. ಇದರಿಂದಾಗಿ ಶಿಲ್ಪ ಕಲೆಯು ಪರಮೇಶ್ವರಾಚಾರ್ಯರ ರಕ್ತದ ಧಮನಿ-ಧಮನಿಗಳಲ್ಲಿ ಹರಿಯಿತು. ಉಳಿ-ಚಾಣ-ಸುತ್ತಿಗೆಗಳೊಂದಿಗೇ ಆಟವಾಡುತ್ತಿದ್ದ ಬಾಲಕ ಪರಮೇಶ್ವರರು ಶಿಲ್ಪಕಲೆಯ ಬಗ್ಗೆ ಎಲ್ಲಿಲ್ಲದ ಪ್ರೀತಿಯನ್ನು ಬೆಳೆಸಿಕೊಂಡರು. ಶಿಲ್ಪವು ಅವರ ಉಸಿರಾಯಿತು. ಕುಳಿತಲ್ಲಿ, ನಿಂತಲ್ಲಿ ಶಿಲ್ಪದ ಬಗ್ಗೆ ಚಿಂತಿಸತೊಡಗಿದರು.

ಪರಮೇಶ್ವರರ ಬಾಲ್ಯ ಜೀವನ ಅತ್ಯಂತ ಕಷ್ಟಕರವಾದುದು, ದುಃಖಕರ ವಾದುದೂ, ಮಮ್ಮಲ ಮರುಕವಟನ್ನು ಉಂಟುಮಾಡುವಂತಹದೂ ಆಗಿತ್ತು. ಅವರ ಏಳನೇ ವಯಸ್ಸಿಗೆ ಅವರ ತಾಯಿ ಕಾಲವಶವಾದರು. ತಾಯಿಯ ಅಕ್ಕರೆ, ಪ್ರೀತಿ, ಪ್ರೇಮದಲ್ಲಿ ಬೆಳೆಯಬೇಕಾದ ಮಗುವು ಬೀದಿಯ ಮಗುವಾಗಬೇಕಾಯಿತು ಅವರ ಬಾಲ್ಯ ಜೀವನಕ್ಕೆ ಇನ್ನೆರಡು ವರ್ಷಗಳಲ್ಲಿ ಮತ್ತೆ ಆಘಾತ ಕಾದಿತ್ತು. ಅವರಿಗೆ ಒಂಬತ್ತು ವರ್ಷವಾಗಿದ್ದಾಗ ತಂದೆ ಶಿಲ್ಪಿ ಮೌನಾಚಾರ್ಯರು ಮತ್ತು ಒಬ್ಬ ಅಣ್ಣನು ಮಾರಕ ರೋಗ ಪ್ಲೇಗಿಗೆ ಬಲಿಯಾದರು. ಸುದೈವವಶಾತ್ ಪರಮೇಶ್ವರಾ ಚಾರ್ಯರು ಈ ಘೋರ ಜಾಡ್ಯದಿಂದ ಪಾರಾದರು. ತಂದೆ-ತಾಯಿಗಳನ್ನು ಕಳೆದುಕೊಂಡು ಪರಮೇಶ್ವರರು ರೋಧಿಸತೊಡಗಿದರು. ಪರಮೇಶ್ವರಾಚಾರ್ಯರ ತಂದೆಯವರಿಗೆ ಒಬ್ಬ ಅಕ್ಕ ಮತ್ತು ಒಬ್ಬ ತಂಗಿ ಇದ್ದರು. ಇವರಲ್ಲಿ ಒಬ್ಬರು ದೃಷ್ಟಿಹೀನ ರಾಗಿದ್ದ ಪರಮೇಶ್ವರಾಚಾರ್ಯರ ತಾತನನ್ನು ತಮ್ಮೂರಿಗೆ ಕರೆದೊಯ್ದರು. ಮತ್ತೊಬ್ಬರು ಬಾಲಕ ಪರಮೇಶ್ವರನನ್ನು ಗೊಪ್ಪೇನಹಳ್ಳಿಗೆ ಕರೆದೊಯ್ದರು. ಹೀಗೆ ನಿರ್ಗತಿಕರಾಗಿದ್ದ ಪರಮೇಶ್ವರರು ತನ್ನ ಹುಟ್ಟೂರಾದ ನುಲೇನೂರನ್ನು ತೊರೆದು ಅನಿವಾರ್ಯವಾಗಿ ವಿಧಿಯಿಲ್ಲದೆ ಚನ್ನಗಿರಿ ತಾಲ್ಲೂಕಿನ ಗೊಪ್ಪೇನಹಳ್ಳಿಗೆ ಬಂದು ಸೇರಬೇಕಾಯಿತು. ಇಲ್ಲಿ ಅವರು ತಮ್ಮ ಸಹೋದರಿ ಲಕ್ಷ್ಮಮ್ಮನ ಮಡಿಲಿನಲ್ಲಿ ಬೆಳೆಯ ತೊಡಗಿದರು. ಮುಂದೆ ಗೊಪ್ಪೇನಹಳ್ಳಿಯೇ ಅವರ ಕಲಾ ತಪಸ್ಸಿನ ತಾಣವಾಯಿತು.

ಇವರ ಸೋದರ ಮಾವನವರಾದ ಕಾಳಾಚಾರ್ಯರು ರಥಗಳನ್ನು ನಿರ್ಮಿಸು

ವುದರಲ್ಲಿ ಸಿದ್ಧಹಸ್ತರಿದ್ದರು. ಅಲ್ಲದೆ ಅನೇಕ ವಿಗ್ರಹಗಳನ್ನೂ ಅವರು ನಿರ್ಮಿಸುತ್ತಿದ್ದರು. ಇವರಿಂದ ಬಾಲಕ ಪರಮೇಶ್ವರಾಚಾರ್ಯರು ರಥಶಿಲ್ಪದ ಮೊದಲ ಪಾಠಗಳನ್ನು ಕಲಿತರು. ಶಿಲ್ಪಿ ಕಾಳಾಚಾರ್ಯರು ಮರದ ಆಯ್ಕೆ, ಅದನ್ನು ಒಣಗಿಸುವಿಕೆ, ರಥಕ್ಕೆ ಗಾಲಿಗಳು, ಅಚ್ಚುಗಳು, ದೇವಾನುದೇವತೆಗಳನ್ನು ಕೆತ್ತುವಿಕೆ ಇವನ್ನೆಲ್ಲಾ ಬಾಲಕ ಪರಮೇಶ್ವರಾಚಾರ್ಯರಿಗೆ ಹೇಳಿಕೊಟ್ಟರು. ಕಲಿಕೆಯಲ್ಲಿ ನಿಷ್ಠಾವಂತರಾಗಿದ್ದ ಬಾಲಕ ಪರಮೇಶ್ವರಾಚಾರ್ಯರು ಎಲ್ಲವನ್ನೂ ಚಾಚೂ ತಪ್ಪದೆ ಕಲಿಯತೊಡಗಿದರು. ಕುಲಕಸುಬಿನಲ್ಲಿ ತೀವ್ರ ಆಸಕ್ತರಿದ್ದ ಬಾಲಕ ಪರಮೇಶ್ವರಾಚಾರ್ಯರಿಗೆ ಬದುಕುವುದಕ್ಕಾಗಿ ದುಡಿಯಬೇಕಾದ ಪರಿಸ್ಥಿತಿಯೂ ಇತ್ತು. ಆಗ್ಗೆ ದುಡಿಮೆಯಿಂದಲೂ ಹೇಳಿಕೊಳ್ಳುವಂತಹ ಪ್ರತಿಫಲವೇನೂ ಸಿಗುತ್ತಿರಲಿಲ್ಲ. ಆ ಕಾಲಕ್ಕೆ ವಿದ್ಯಾಭ್ಯಾಸ ಪಡೆಯುತ್ತಾ ಕುಳಿತು ಉಣ್ಣಲು ಯಾರಿಗೂ ಸಾಧ್ಯವಿರಲಿಲ್ಲ. ಪರಿಣಾಮ ಅವರ ಶಿಕ್ಷಣ ಲೋಯರ್ ಸೆಕೆಂಡರಿಯವರೆಗೆ ಮಾತ್ರ ನಡೆಯಿತು . ಮುಂದೆ ಓದಲಾಗಲಿಲ್ಲ. ಇಪ್ಪತ್ತೆರಡು ವರ್ಷವಾಗುವುದರೊಳಗಾಗಿ ಎಲ್ಲ ತರಹದ ಮರದ, ಶಿಲೆಯ, ಲೋಹದ ಕೆಲಸಗಳಲ್ಲೂ ಕೈಯಾಡಿಸಿ ಅದರಲ್ಲಿ ಪರಿಣತಿ ಪಡೆದರು. ಅವರು ಸರ್ವಜಿತ್ ನಾಮ ಸಂವತ್ಸರದಲ್ಲಿ ಚಿಕ್ಕ ವೀರಾಚಾರ್ಯರ ಪುತ್ರಿಯಾದ ಫಣಿಯಮ್ಮನ ಸಂಗಡ ಗ್ರಹಸ್ಥಾಶ್ರಮಕ್ಕೆ ಕಾಲಿಟ್ಟರು. ತಮ್ಮ ವೃತ್ತಿ ಬದುಕಿನ ಜೊತೆ ಜೊತೆಗೇ ತಮ್ಮ ಸಂತಾನದ ಕುಡಿಗಳನ್ನು ಹೊಂದಿದರು. ಕಮಲಾಕ್ಷಮ್ಮ, ನಾಗರತ್ನಮ್ಮ, ಶ್ರೀಕಂಠಾಚಾರ್ಯ, ಉಜ್ಜಿನಾಚಾರ್ಯ, ವಿಮಲ ಮತ್ತು ಸರ್ವೇಶ್ವರಾಚಾರ್ಯ ಎಂಬ ಮಕ್ಕಳನ್ನು ಪಡೆದರು. ಮೂವರು ಗಂಡು ಮಕ್ಕಳಲ್ಲಿ ಶ್ರೀಕಂಠಾಚಾರ್ಯರೇ ಹಿರಿಯ ಮಗ. ಶ್ರೀಕಂಠಾಚಾರ್ಯರು ಎಸ್. ಎಸ್.ಎಲ್.ಸಿ. ವರೆಗೆ ಮಾತ್ರ ಓದಿದ್ದಾರೆ. ಆದರೆ ಅವರ ಮುದ್ದಾದ ಕೈಬರವಣಿಗೆ, ಚಿತ್ರರಚನೆ, ಶಿಲ್ಪಶಾಸ್ತ್ರದಲ್ಲಿರುವ ಆಗಮೋಕ್ತ ಜ್ಞಾನ ಎಂತಹ ವಿದ್ಯಾವಂತರನ್ನೂ ನಾಚಿಸುತ್ತದೆ. ಉಜ್ಜಿನಾಚಾರ್ಯ ಮತ್ತು ಸರ್ವೇಶ್ವರಾಚಾರ್ಯ ಎಂಬ ಪರಮೇಶ್ವರಾಚಾರ್ಯರ ಇಬ್ಬರು ಕಿರಿಯ ಮಕ್ಕಳು ಕೃಷಿಯಲ್ಲಿ ತೊಡಗಿಕೊಂಡಿದ್ದಾರೆ.

ಶಿಲ್ಪ ಪ್ರವೀಣರಾಗಿದ್ದ ತಮ್ಮ ಮಾವನವರಾದ ಚಿಕ್ಕ ವೀರಾಚಾರ್ಯರಿಂದ ಯುವಕ ಪರಮೇಶ್ವರಾಚಾರ್ಯರು ಶಿಲಾ ಶಿಲ್ಪವನ್ನು ಕಲಿತುಕೊಂಡಿದ್ದರು. ಚಿಕ್ಕ ವೀರಾಚಾರ್ಯರ ತಂದೆಯ ಹೆಸರು ಶಿಲ್ಪಿ ರುದ್ರಾಚಾರ್ಯ ಎಂದು. ರುದ್ರಾ ಚಾರ್ಯರು ಕಲಾ ನಿಪುಣರು. ಅವರ ಕಲಾ ನೈಪುಣ್ಯತೆ ಶ್ರೀ ನಾಲ್ವಡಿ ಕೃಷ್ಣರಾಜ

ಒಡೆಯರ ಗಮನಕ್ಕೂ ಬಂದಿತ್ತು. ಅವರ ಕಲಾ ನೈಪುಣ್ಯತೆಗೆ ಮೆಚ್ಚಿ ಮಹಾರಾಜರು ಆರು ಎಕರೆ ಭೂಮಿಯನ್ನು ದತ್ತಿಯಾಗಿ ಕೊಟ್ಟಿದ್ದರು. ಇಂತಹ ಕಲಾವಂತ ತಂದೆಯ ಸುಪುತ್ರರಾಗಿದ್ದ ಚಿಕ್ಕ ವೀರಾಚಾರ್ಯರ ಕಲಾವಂತ ಅಳಿಯನಾಗಿ ಬಂದ ಪರಮೇಶ್ವರಾಚಾರ್ಯರ ಶಿಲ್ಪಕಲಾ ಆಸಕ್ತಿಗೆ ಕೊನೆಯಿರಲಿಲ್ಲವಾದ್ದರಿಂದ ಚಿನ್ನ-ಬೆಳ್ಳಿಯ ಕೆಲಸಗಳನ್ನು ಕಲಿತುಕೊಂಡರು. ಪಂಚ ಲೋಹಗಳಲ್ಲಿ ವಿಗ್ರಹ ತಯಾರಿಸುವ ವಿದ್ಯೆಯನ್ನು, ನಕಾಶಿ ಕೆಲಸವನ್ನು, ಪ್ರಭಾವಳಿಗಳಲ್ಲಿ ಉಬ್ಬು ಚಿತ್ರ ಬಿಡಿಸುವುದನ್ನು, ಕುಸುರಿ ಕೆಲಸ ಮಾಡುವುದನ್ನು ಕರತಲಾಮಲಕ ಮಾಡಿಕೊಂಡರು. ಆಮೇಲೆ ಅವರು ಹಿಂದಿರುಗಿ ನೋಡಲಿಲ್ಲ. ಮುಂದಿನದೆಲ್ಲ ಅಂಕಿಸಂಖ್ಯೆಗಳ ಇತಿಹಾಸ.

## ರಥಶಿಲ್ಪ

ಪರಮೇಶ್ವರಾಚಾರ್ಯರ ಸೋದರ ಮಾವನವರಾದ ಶ್ರೀಕಾಳಾಚಾರ್ಯರು ಅಗ್ರಗಣ್ಯ ರಥಶಿಲ್ಪಿಗಳಾಗಿದ್ದರು. ಯುವಕ ಪರಮೇಶ್ವರಾಚಾರ್ಯರ ಮನಸ್ಸು ರಥಗಳ ಕಡೆಗೆ ಹೊರಳಿತು. ಅವರು ಮರದ ತುಂಡುಗಳನ್ನು ಕೊಯ್ಯುವುದು, ಮಟ್ಟಸ ಮಾಡುವುದರಿಂದ ಹಿಡಿದು ರೇಖಾ ಚಿತ್ರ ರಚನೆ ಹಾಗೂ ವಿಗ್ರಹಗಳ ಕೆತ್ತನೆಯವರೆಗೆ ಬಹಳ ಚೆನ್ನಾಗಿ ಅಭ್ಯಾಸ ಮಾಡಿದರು. ಆಮೇಲೆ ಪರಮೇಶ್ವರಾಚಾರ್ಯರ ಮಾವನವರಾದ ಕಾಳಾಚಾರ್ಯರು ಪ್ರೋತ್ಸಾಹವಿಲ್ಲದ, ಬಹಳ ನಷ್ಟದ ಕೆಲಸವಾದ್ದರಿಂದ ರಥ ನಿರ್ಮಾಣವನ್ನು ಬಿಟ್ಟುಬಿಟ್ಟರು. ತಮ್ಮ ಸೋದರತ್ತೆಯ ಮಗನಾದ ಎ.ಮೌನಾಚಾರ್ಯನನ್ನು ಯುವಕ ಪರಮೇಶ್ವರಾಚಾರ್ಯರು ಹುರಿದುಂಬಿಸಿ ರಥಗಳನ್ನು ರಚಿಸುವಂತೆ ಪ್ರೇರೇಪಣೆ ಮಾಡಿದರು. ಅವರಿಬ್ಬರೂ ಒಟ್ಟಾಗಿ ತಯಾರಿಸಿದ ರಥವೇ ನೀರಗುಂದದ ರಥ. ಸೋದರ ಮಾವನ ಸಲಹೆ, ನೆರವಿನೊಂದಿಗೂ ಈ ರಥವನ್ನು ಪೂರ್ಣಗೊಳಿಸಿ ಮೆಚ್ಚುಗೆ ಪಡೆದಿದ್ದರು. ಅನಂತರ ಅಜ್ಜಿಹಳ್ಳಿಯ ಶಿಲ್ಪಶಾಸ್ತ್ರ ಪ್ರವೀಣರಾಗಿದ್ದ ನಾಗೇಂದ್ರಾಚಾರ್ಯರನ್ನು ಗುರುಗಳಾಗಿ ಪಡೆಯಲು ಸಾಧ್ಯವಾಯಿತು. ಮೈಸೂರಿನ ರಾಜರ ಆಶ್ರಯದಲ್ಲಿ ಶಿಲ್ಪವನ್ನು ಬೆಳೆಸಿಕೊಂಡು ಬಂದ ಕೀರ್ತಿ ನಾಗೇಂದ್ರಚಾರ್ಯರದು. ಮೈಸೂರು ಚಾಮುಂಡಿ ಬೆಟ್ಟದ ಚಾಮುಂಡೇಶ್ವರಿಯ ಅಪೂರ್ವವಾದ ರಥವನ್ನು ನಿರ್ಮಿಸಿಕೊಟ್ಟವರೇ ಈ

ನಾಗೇಂದ್ರಾಚಾರ್ಯರು. ಇಂತಹ ಗುರುವಿನ ಶಿಷ್ಯರಾದ ಪರಮೇಶ್ವರಾಚಾರ್ಯರು ಗುರುವನ್ನು ಮೀರಿದ ಶಿಷ್ಯರಾದರು. ಗುರುವಿನ ಕಲಾ ಪರಂಪರೆಯನ್ನು ಮುಂದುವರಿಸಿದರು.

ಪರಮೇಶ್ವರಾಚಾರ್ಯರ ಮಾತಿನಲ್ಲಿ ಹೇಳುವುದಾದರೆ, "ಶಿಲ್ಪ ಕಲೆಯಲ್ಲಿ ದೇವಾಲಯ ಶಿಲ್ಪ ದೇವತಾ ಮೂರ್ತಿಶಿಲ್ಪ ಕೋಟೆ, ಕೊತ್ತಳ, ನಗರಾದಿಗಳ ನಿರ್ಮಾಣ ಕಲಾ ಪ್ರಕಾರಗಳು ಇರುವಂತೆಯೇ ರಥಶಾಸ್ತ್ರವೂ ಒಂದು ವಿಭಾಗವಾಗಿದೆ. ಇದಕ್ಕೆ ಧಾರ್ಮಿಕ ನೆಲೆ-ಬೆಲೆ ಇದೆ. ಇವುಗಳ ರಚನಾ ವಿಧಾನ, ತಂತ್ರಜ್ಞಾನ ಪ್ರತಿಯೊಬ್ಬ ರಥಶಿಲ್ಪಿಯೂ ಅರಿತವನೇ ಆಗಿರುತ್ತಾನೆ. ರಥಗಳು ಹಿಂದೂ ದೇವಾಲಯಗಳಲ್ಲಿ ಸಾವಿರಾರು ವರ್ಷಗಳಿಂದಲೂ ಉತ್ಸವದ ಸಲುವಾಗಿ ಬಳಕೆಯಾಗುತ್ತಿವೆ. ಇವುಗಳನ್ನು ಶಿಲ್ಪಿಯು ಪ್ರಾಚೀನ ಶಾಸ್ತ್ರ-ಗ್ರಂಥಗಳ ಆಧಾರದಿಂದ ರಚಿಸುತ್ತಾನೆ. ರಥ ನಿರ್ಮಾಣಕ್ಕೆ ಮೊದಲ ಹಂತದಲ್ಲಿ ಬೇಕಾಗುವ ಮರಗಳ ಆಯ್ಕೆಯ ನಂತರವೇ ಕೆಲಸ ಪ್ರಾರಂಭವಾಗುವುದು."

ರಥಶಿಲ್ಪಿ ಎಂದೇ ವಿದ್ವಾಂಸರಿಂದ ಗುರುತಿಸಲ್ಪಟ್ಟಿರುವ ಎಂ. ಪರಮೇಶ್ವರಾಚಾರ್ಯರು ಇದುವರೆಗೆ ಹನ್ನೊಂದು ರಥಗಳನ್ನು ಕರ್ನಾಟಕದ ಬೇರೆ ಬೇರೆ ದೇವಾಲಯಗಳಿಗೆ ನಿರ್ಮಿಸಿಕೊಟ್ಟ ಹೆಗ್ಗಳಿಕೆ ಹೊಂದಿದ್ದಾರೆ. ಸೋದರ ಮಾವನವರಾದ ಶಿಲ್ಪಿ ಕಾಳಾಚಾರ್ಯರಿಂದ ರಥಶಿಲ್ಪ ತಂತ್ರಗಳನ್ನು ಚೆನ್ನಾಗಿ ಕಲಿತಿದ್ದ ಪರಮೇಶ್ವರಾಚಾರ್ಯರಿಗೆ ಚಿತ್ರದುರ್ಗ ಜಿಲ್ಲೆಯ ಹೊಸದುರ್ಗ ತಾಲ್ಲೂಕಿನ ನೀರಗುಂದ ಎಂಬ ಐತಿಹಾಸಿಕ ರಾಜಧಾನಿ ಗ್ರಾಮದಿಂದ ರಥ ನಿರ್ಮಿಸಲು ಕರೆ ಬಂತು. ಆಗ ಇನ್ನೂ ಅವರಿಗೆ ಕೇವಲ 22 ವರ್ಷ. ಆ ವಯಸ್ಸಿಗೇ ಅವರು ನೀರಗುಂದ ಗ್ರಾಮದ ಭೈರವೇಶ್ವರ ದೇವಾಲಯಕ್ಕೆ 25 ಅಡಿ ಎತ್ತರದ ಅತ್ಯುತ್ತಮ ರಥ ರಚಿಸಿಕೊಟ್ಟು ಗ್ರಾಮಸ್ಥರೆಲ್ಲರ ಪ್ರೀತಿಗೆ ಪಾತ್ರರಾಗಿ ಗೌರವಿಸಲ್ಪಟ್ಟರು. 1989ನೇ ಇಸವಿಯಲ್ಲಿ ನಾನು ನೀರಗುಂದ ಗ್ರಾಮಕ್ಕೆ ನನ್ನ ಸೋದರ ನಾಗಲಿಂಗಾಚಾರ್ ತಯಾರಿಸಿದ ವಿವಾಹ ಮಹೂರ್ತದ ಕನ್ಯಾತಾಳಿಯನ್ನು ಮತ್ತು ಆಭರಣಗಳನ್ನು ಸಂಬಂಧಪಟ್ಟವರಿಗೆ ತಲುಪಿಸಲು ಹೋಗಿದ್ದಾಗ ಆ ರಥವನ್ನು ನೋಡಿ ಆನಂದಪಟ್ಟಿದ್ದೆ. ನನ್ನ ಪದವಿ ಸ್ನೇಹಿತನೊಬ್ಬ ಆ ರಥದ ಅಂದವನ್ನು ಬಹಳ ಸೊಗಸಾಗಿ ವಿವರಿಸುತ್ತಿದ್ದ. ಆದರೆ ಅದನ್ನು ರಚಿಸಿದ ಶಿಲ್ಪಿ ಇವರೇ ಎಂದು ಆಗ್ಗೆ ನನಗೆ ತಿಳಿದಿರಲಿಲ್ಲ.

1968ರಲ್ಲಿ ಪರಮೇಶ್ವರಾಚಾರ್ಯರು ಚಿಕ್ಕಮಗಳೂರು ಜಿಲ್ಲೆಯಗಟೆ ಗ್ರಾಮದ

ಶ್ರೀ ಮಲ್ಲಿಕಾರ್ಜುನ ಸ್ವಾಮಿ ದೇವರಿಗೆ 50 ಅಡಿ ಎತ್ತರದ ರಥ ನಿರ್ಮಿಸಿಕೊಟ್ಟಿದ್ದಾರೆ. 1970-80ದಶಕ ಇವರ ರಥ ಶಿಲ್ಪದ ಉತ್ಕರ್ಷ ಕಾಲ. 1973ರಲ್ಲಿ ಮಂಡ್ಯ ಜಿಲ್ಲೆಯ ಚಿಣ್ಯ ಗ್ರಾಮಕ್ಕೆ 25 ಅಡಿ ಎತ್ತರದ ಶ್ರೀ ಸೋಮೇಶ್ವನಹಳ್ಳಿ ಅಮ್ಮನವರ ರಥ ನಿರ್ಮಿಸಿದರು. ಮರು ವರ್ಷ (1974) ನಾಗಮಂಗಲ ತಾಲ್ಲೂಕು ಬಿಂಡಿಗನವಿಲೆಯ ಶ್ರೀ ಚನ್ನಕೇಶ್ವರ ದೇವರ 25 ಅಡಿ ಎತ್ತರವುಳ್ಳ ರಥವನ್ನು ರಚಿಸಿಕೊಟ್ಟರು. 1975ರಲ್ಲಿ ಮೈಸೂರು ಒಂಟಿಕೊಪ್ಪಲ್‌ನ ಶ್ರೀ ವೆಂಕಟರಮಣ ಸ್ವಾಮಿ ದೇವರಿಗೆ25 ಅಡಿ ಎತ್ತರವುಳ್ಳ ರಥವನ್ನು ರಚಿಸಿಕೊಟ್ಟರು. 1977ರಲ್ಲಿ ಕೂಡ್ಲಿಗಿ ತಾಲ್ಲೂಕು ಉಜ್ಜಯಿನಿಯ ಶ್ರೀ ಮರುಳ ಸಿದ್ಧೇಶ್ವರ ಸ್ವಾಮಿಗೆ 50 ಅಡಿ ಎತ್ತರದ ರಥವನ್ನು ರಚಿಸಿಕೊಟ್ಟರು. 1979ರಲ್ಲಿ (ಹೊಸಪೇಟೆ ತಾಲ್ಲೂಕಿನ) ಹಂಪೆಯಿಂದ ಕರೆ ಬಂತು. ಅಲ್ಲಿ ಶ್ರೀ ವಿರೂಪಾಕ್ಷೇಶ್ವರ ಸ್ವಾಮಿಗೆ 50 ಅಡಿ ಎತ್ತರದ ರಥವನ್ನು ರಚಿಸಿಕೊಟ್ಟು ಮಾನ-ಸನ್ಮಾನಗಳನ್ನು ಪಡೆದು ಹಿಂದಿರುಗಿದರು.

1980-90 ದಶಕ ಮತ್ತೊಂದು ರೀತಿಯಲ್ಲಿ ಇವರ ಬದುಕಿನ ಅದ್ಭುತ ದಶಕವಾಯಿತು. 1982ರಲ್ಲಿ ಚಿತ್ರದುರ್ಗ ಜಿಲ್ಲೆಯ ನಾಯಕನ ಹಟ್ಟಿ ಶ್ರೀ ತಿಪ್ಪೇರುದ್ರ ಸ್ವಾಮಿ ದೇವರಿಗೆ ತಮ್ಮ ಜೀವಮಾನದ ಅತಿ ಹೆಚ್ಚಿನ, 68 ಅಡಿ ಎತ್ತರದ ರಥವನ್ನು ರಚಿಸಿಕೊಟ್ಟರು. 1984ರಲ್ಲಿ ಬಳ್ಳಾರಿಯ ಶ್ರೀ ಕಾಳಿಕಮಠೇಶ್ವರಿ ದೇವಿಗೆ28 ಅಡಿ ಎತ್ತರದ ರಥವನ್ನು ರಚಿಸಿಕೊಟ್ಟು ಪ್ರಶಂಸೆಗೆ ಒಳಗಾದರು. ಮರುವರ್ಷವೇ 1985ರಲ್ಲಿ, ಬಳ್ಳಾರಿ ಜಿಲ್ಲೆ ಸೊಂಡೂರಿನ ಶ್ರೀ ಶಿವಪುರೇಶ್ವರ ಸ್ವಾಮಿ ದೇವರಿಗೆ28 ಅಡಿ ಎತ್ತರದ ರಥವನ್ನು ರೂಪಿಸಿಕೊಟ್ಟರು. ಮತ್ತೆ 1986ರಲ್ಲಿ ತಮ್ಮದೇ ಗ್ರಾಮದ ಶ್ರೀ ಆಂಜನೇಯ ಸ್ವಾಮಿಗೆ 28 ಅಡಿ ಎತ್ತರದ ಅತ್ಯುತ್ತಮ ರಥವನ್ನು ರಚಿಸಿಕೊಟ್ಟು ಗೌರವಾದರಗಳಿಗೆ ಪಾತ್ರರಾದರು.

ಶ್ರೀ ಪಿ. ಆರ್. ತಿಪ್ಪೇಸ್ವಾಮಿಯವರ ಮಾತಿನಲ್ಲಿ ಹೇಳುವುದಾದರೆ, ''ಪರಮೇಶ್ವರಾಚಾರ್ಯರ ಕಲೆಯ ಬೆಲೆಯನ್ನು ಅಳೆಯಲು ಮೈಸೂರಿನ ಶ್ರೀ ಲಕ್ಷ್ಮೀ ವೆಂಕಟರಮಣ ಸ್ವಾಮಿಯ ರಥ ಒಂದೇ ಸಾಕೆನಿಸುತ್ತದೆ. ಕೇವಲ ಕೆಲವೇ ತಿಂಗಳುಗಳ ಅವಧಿಯಲ್ಲಿ $22^1/_2$ ಅಡಿ ಎತ್ತರದ ರಥವನ್ನು ನಿರ್ಮಿಸಿದ ಕೀರ್ತಿ ಈ ಶಿಲ್ಪಿಗಳದು. ಈ ರಥಕ್ಕೆ ಸಾಗುವಾನಿ ಮರ ಬಳಸಲಾಗಿದ್ದು ಇಲ್ಲಿಯ ಮೂರ್ತಿಗಳ ಕುಸುರಿನ ಕೆತ್ತನೆ ಕಲೆ ಎಂತಹವರನ್ನಾದರೂ ಆಕರ್ಷಿಸುತ್ತದೆ. ಮರವನ್ನು ಮೇಣದಂತೆ ಕೆತ್ತಿ ನಿರಾಕಾರಕ್ಕೆ ಆಕಾರ ಕೊಟ್ಟು ಜೀವಕಳೆ ತರುವ ಪರಮೇಶ್ವರಾಚಾರ್ಯರ ಕಲೆಗಾರಿಕೆಯಲ್ಲಿ ನಯ ನಾಜೂಕುತನ ಇದೆ.'' '' ಇಲ್ಲಿನ ರಥದಲ್ಲಿನ ವಿಗ್ರಹಗಳ ಸಪ್ರಮಾಣ, ಭಾವಭಂಗಿ,

ವಿವಿಧ ಆಯುಧಗಳ ಮಾಟ, ಬಳ್ಳಿ, ವರಸೆ, ಆನೆಗಳ ಸಾಲು, ಗಗನಕ್ಕೆ ಹಾರುತ್ತಿರುವ ಸಿಂಹಗಳು ನಮ್ಮನ್ನು ಆಕರ್ಷಿಸುತ್ತವೆ. ಆಚಾರ್ಯರ ಶ್ರೇಷ್ಠ ದರ್ಜೆಯ ಕೃತಿ ಇದು ಎನ್ನಲು ಅಡ್ಡಿಯಿಲ್ಲ''.

ಈ ರಥವನ್ನು ನಿರ್ಮಿಸಲು ಪ್ರೊ. ಅಪ್ರಮೇಯ ಅವರು ಪರಮೇಶ್ವರಾಚಾರ್ಯರನ್ನು ಕರೆಸಿದ್ದರು. ಅಪ್ರಮೇಯರು ಇಂಜಿನಿಯರಿಂಗ್ ಕಾಲೇಜಿನ ನಿವೃತ್ತ ಪ್ರಾಧ್ಯಾಪಕರು, ದೈವ ಭಕ್ತರು. 1975ರಲ್ಲಿ ಕಡೆದ ವೆಂಕಟರಮಣ ರಥವು ಅದ್ಭುತವಾಗಿತ್ತು. ನಂತರ ಸೃಷ್ಟಿಸಿದ ಇತರೆಲ್ಲ ರಥಗಳೂ ಒಂದಕ್ಕಿಂತ ಒಂದು ಅದ್ಭುತವಾಗಿದ್ದವು ಎಂಬುದರಲ್ಲಿ ಯಾವುದೇ ಶಂಕೆಯಿಲ್ಲ.

ಕನ್ನಡ ನಾಡಿನಲ್ಲಿ ಅನೇಕ ರಥಶಿಲ್ಪಿಗಳಿದ್ದಾರೆ. ಅಪೂರ್ವವಾಗಿರುವ ಮತ್ತು ಅಪರೂಪವಾಗಿರುವ ಈ ಶಾಸ್ತ್ರೀಯ ಶಿಲ್ಪಕಲೆಯಲ್ಲಿ ತೊಡಗಿಕೊಂಡಿರುವವರಲ್ಲಿ ರಾಷ್ಟ್ರಪ್ರಶಸ್ತಿ ಪುರಸ್ಕೃತರಾದ ವೆಂಕಟರಮಣ ಆಚಾರ್ಯ, ಲಕ್ಷ್ಮೀನಾರಾಯಣ ಆಚಾರ್ಯ, ಧರ್ಮಸ್ಥಳದ ಮಹಾಲಿಂಗಾಚಾರ್ಯ, ಉಡುಪಿಯ ರಜತ ಶಿಲ್ಪಿ ಅಂಬಲಪಾಡಿಯ ಗಂಗಾಧರಾಚಾರ್ಯ, ಸೊರಬದ ಮರೂರು ಗಣಪತಪ್ಪ, ಶಿಕಾರಿಪುರದ ತಿಪ್ಪಾಜಪ್ಪ, ರಾಣೆ ಬೆನ್ನೂರಿನ ಬಿದರಿ ಕೃಷ್ಣಪ್ಪ, ನಾಗಮಂಗಲದ ರಾಜಾಚಾರ್, ಮೈಸೂರಿನ ಎಸ್.ನರಸಿಂಹಾಚಾರ್, ಲಿಂಗಾಚಾರ್, ಕೊಪ್ಪಳದ ಎಂ.ಜಿ. ಬಡಿಗೇರ, ಬದಾಮಿ ತಾಲ್ಲೂಕಿನ ಶಂಕ್ರಪ್ಪ, ಎಂ. ಬಡಿಗೇರ ಹಾಗೂ ಅವರ ಪುತ್ರ ಮನೋಹರ (ಮನೋಹರ ಈಗ ಬೆಂಗಳೂರಿನಲ್ಲಿದ್ದಾರೆ) ಮುಂತಾದವರು ಮುಖ್ಯರು. ಇಂತಹವರ ಸಾಲಿನಲ್ಲಿ ಮೊದಲ ಪಂಕ್ತಿಯಲ್ಲಿ ನಿಲ್ಲಬಹುದಾದ ನಿಗರ್ವಿ, ಅಪ್ಪಟ ಹೃದಯವಂತ, ಉದಾರಿ, ಕಲಾನಿಪುಣ ಪರಮೇಶ್ವರಾಚಾರ್ಯರು ಅಪರೂಪದ ರಥಶಿಲ್ಪಿಗಳು.

ಒಂದು ದೇವರನ್ನು ರೂಪಿಸಬೇಕಾದರೂ 'ದೇಹಾಂಗುಲ' 'ಮಾನ'ವನ್ನು ಇಟ್ಟುಕೊಳ್ಳುವಂತೆ ರಥನಿರ್ಮಾಣದಲ್ಲಿ ರಥಕ್ಕೂ ದೇಹಾಂಗುಲ ಇಟ್ಟುಕೊಳ್ಳುತ್ತಾರೆ. ದೇಹಾಂಗುಲವು ಆಯಾ ದೇವತೆಯರಿಗೆ ಹೊಂದಾಣಿಕೆ ಇರುವಂತೆ - ಅಂದರೆ ಪಂಚಾಂಗ (ವಾರ, ನಕ್ಷತ್ರ, ತಿಥಿ, ಯೋಗ ಮತ್ತು ಕರಣಗಳ)ವನ್ನು ಒಳಗೊಂಡಂತೆ ತಾರ್ಕಿಕ ಹೊಂದಾಣಿಕೆಯದಾಗಿರುತ್ತದೆ. ಜ್ಯೋತಿಷ್ಯ, ವೇದ, ಶಿಲ್ಪಶಾಸ್ತ್ರಗಳನ್ನು ಹೇಗೆ ಆಧರಿಸಿದೆಯೋ ಹಾಗೆಯೇ ಗಣಿತ ಮುಂತಾದ ವಿಜ್ಞಾನಗಳನ್ನು ಇದು ಆಧರಿಸಿದೆ.




ಶ್ರೀ ವಿಶ್ವಕರ್ಮ ಪರಬ್ರಹ್ಮ, ಗೊಪ್ಪೇನಹಳ್ಳಿ ರಥ



ಗೋಪಾಲಕೃಷ್ಣ ರಥ



ಶ್ರೀ ತರಳಬಾಳು ಶಿವಕುಮಾರ ಶಿವಾಚಾರ್ಯ ಮಹಾಸ್ವಾಮಿಗಳು



ಮೈಸೂರು ಶ್ರೀ ವೆಂಕಟರಮಣಸ್ವಾಮಿ ರಥ



ಶ್ರೀ ಚೆನ್ನಕೇಶವ, ಶಿಲಾಮೂರ್ತಿ



ಪ್ಲಾಸ್ಟರ್ ಆಫ್ ಪ್ಯಾರಿಸ್‌ನಲ್ಲಿ ಮಾಡೆಲ್‌ಗಳು



ಆಂಜನೇಯ ಸ್ವಾಮಿರಥ



ಎಸ್. ಆರ್. ನಾಗಪ್ಪ ಶ್ರೇಷ್ಠಿಯವರ ಕಂಚಿನ ಪ್ರತಿಮೆ



ಪಾರ್ವತಿ, ಶಿಲಾಮೂರ್ತಿ



ಶ್ರೀ ಚೆನ್ನಕೇಶವ, ಶಿಲಾಮೂರ್ತಿ



ಶ್ರೀ ತಿಪ್ಪೇರುದ್ರಸ್ವಾಮಿ ರಥದ ವಿಗ್ರಹ

ರಥದ ಅಧಿಸ್ಥಾನವನ್ನು ಆಧರಿಸಿ ಎತ್ತರ ಮತ್ತು ಮಂಟಪ ಕಂಬಗಳನ್ನು ನಿರ್ಧರಿಸಬೇಕಾಗುತ್ತದೆ. ಆದರೆ ಕೆಲವೊಮ್ಮೆ ರಥದ ಎತ್ತರವನ್ನು ಮೊದಲು ಪರಿಗಣನೆಗೆ ತೆಗೆದುಕೊಂಡು ಅಧಿಸ್ಥಾನದ ವಿಸ್ತಾರ ಮತ್ತು ತೂಕವನ್ನು ನಿರ್ಧರಿಸಲಾಗುತ್ತದೆ. ಭಕ್ತಾದಿಗಳೆಲ್ಲರೂ ಸೇರಿ ಎಳೆಯಲು ಅನುಕೂಲವಾಗುವಂತೆ ರಥವನ್ನು ನಿರ್ಮಿಸಲಾಗುತ್ತದೆ. ರಥ ನಿರ್ಮಾಣದಲ್ಲಿ ಅಗತ್ಯವಾದಷ್ಟು ಕಬ್ಬಿಣದ ಸರಳುಗಳನ್ನು ಉಪಯೋಗಿಸಲಾಗುತ್ತದೆ. ರಥದ ಎತ್ತರ ಮತ್ತು ಗಾತ್ರಕ್ಕೆ ಅನುಗುಣವಾಗಿ ನಾಲ್ಕು ಚಕ್ರಗಳ ಜೊತೆಗೆ ಐದನೇ ಮತ್ತು ಆರನೇ ಚಕ್ರಗಳನ್ನು ಸೇರಿಸಲಾಗುತ್ತದೆ. (ಪುರಿ ಜಗನ್ನಾಥ ದೇವರ ರಥಕ್ಕೆ 32 ಚಕ್ರಗಳಿವೆ). ನೂರಾರು ಪ್ರಮುಖರು ರಥದ ಮೇಲೆಯೇ ಇರುತ್ತಾರೆ. ಇಂತಹ ರಥಗಳಿಗೆ ಕಬ್ಬಿಣದ ಬಳಕೆ ಹೆಚ್ಚೇ ಇರುತ್ತದೆ. ಸಾಮಾನ್ಯವಾಗಿ ಸಮಾನಾಂತರ ಸ್ಥಳಗಳಲ್ಲಿ ದೇವರ ಪೀಠದಿಂದ ಬಂದ ಬೋಲ್ಟುಗಳು ಅಚ್ಚಿನ ಕೊನೆಯಲ್ಲಿ ನಟ್ಟುಗಳಿಂದ ಬಿಗಿಗೊಳಿಸಲ್ಪಟ್ಟಿರುತ್ತವೆ.

ರಥ ನಿರ್ಮಾರ್ಣಕ್ಕೆ ಐದು ಜಾತಿಯ ಮರಗಳನ್ನು ಉಪಯೋಗಿಸುತ್ತಾರೆ. ಭದ್ರಪೀಠ- ಅಚ್ಚು ಮತ್ತು ಗಾಲಿಗಳಿಗೆ ಗಟ್ಟಿಯಾದ ಮರವನ್ನು ಉಪಯೋಗಿಸುತ್ತಾರೆ. ಮತ್ತಿ, ಬಾಗಿ, ಕಿರಾಳ ಭೋಗಿ, ಜಾಲಿ ಮತ್ತಿತರ ಮರಗಳನ್ನು ಇಂತಹ ಕೆಲಸಗಳಿಗೆ ಉಪಯೋಗಿಸುವರು. 'ಕಂಕಣ' ಮತ್ತು 'ವಿಸ್ತಾರ'ಗಳಿಗೆಲ್ಲ ಮೆದುವಾದ ಮತ್ತು ಹಗುರವಾದ ಮರಗಳನ್ನು ಬಳಸುತ್ತಾರೆ. ಶ್ರೀಗಂಧ, ತೇಗ, ಬೇವು, ಹೊನ್ನೆ, ಭೂತಾಳಿ ಮರಗಳು ಮೆದು ಮತ್ತು ಹಗುರವಾಗಿರುತ್ತವೆ. ಇವು ದೇವತಾ ಮರಗಳು. ಎಣ್ಣೆ ಅಂಶಗಳನ್ನು ಹೊಂದಿರುತ್ತವೆ. ಉತ್ತಮ ಕೆಲಸಗಳಿಗೆ ಬರುತ್ತವೆ. ಆದ್ದರಿಂದ ಇವುಗಳನ್ನು ಇಲ್ಲಿ ಉಪಯೋಗಿಸಿಕೊಳ್ಳಲಾಗುತ್ತದೆ.

ಎಲ್ಲಕ್ಕಿಂತ ಮೊದಲು ಬ್ರಹ್ಮಸ್ಥಾನವಾದ ಅಧಿಸ್ಥಾನವನ್ನು ಹಾಕುತ್ತಾರೆ. ಪ್ರತಿಯೊಂದು ರಥದಲ್ಲಿಯೂ ಬ್ರಹ್ಮ ವಿಷ್ಣು ಈಶ್ವರ ಸ್ಥಾನವೆಂದು ಗುರುತಿಸಲಾಗುತ್ತದೆ. ಒಂದು ಶಿವಲಿಂಗವನ್ನು ಮಾಡಿದರೂ ಕೆಳಭಾಗಕ್ಕೆ ಬ್ರಹ್ಮಸ್ಥಾನವೆಂತಲೂ, ಮೇಲ್ಭಾಗವನ್ನು ವಿಷ್ಣು ಸ್ಥಾನವೆಂತಲೂ, ಅದರ ಮೇಲೆ ಕೂರುವ ಸಾಲಿಗ್ರಾಮವನ್ನು ಶಿವ ಅಥವಾ ದೇವರು ಎಂತಲೂ ಕರೆಯುತ್ತಾರೆ. ಅಧಿಸ್ಥಾನದಲ್ಲಿ ಗಾಲಿಗಳು ಕೂರುವ ಅಚ್ಚು (Axle), ಅಚ್ಚನ್ನು ಬಿಗಿಗೊಳಿಸುವ ಒಂದು ಚೌಕಟ್ಟು ಇರುತ್ತದೆ. ಅಧಿಸ್ಥಾನದಲ್ಲಿ ಅಷ್ಟದಿಗ್ಗಜಗಳೂ, ಅಷ್ಟನಾಗಗಳೂ, ಗಜ-ಹಂಸಗಳೂ, ಹೊರುವ ಜನರು, ನರ್ತಕಿಯರು, ಕೋಲಾಟ, ಸಂಗೀತ ಗೋಷ್ಠಿ ವಾದ್ಯಗೋಷ್ಠಿ ನಂದಿಕೋಲು ಕುಣಿತ, ವೀರಭದ್ರ ಕುಣಿತ, ದೇವತಾ

ಚರಿತ್ರೆ ಇತ್ಯಾದಿ ಇರುತ್ತವೆ. ಇದೆಲ್ಲವನ್ನೂ ಒಳಗೊಂಡದ್ದು ಭದ್ರಪೀಠ. ಇದರ ಮೇಲ್ಭಾಗಕ್ಕೆ 'ಕಂಕಣ' ಎನ್ನುತ್ತಾರೆ. ಇಲ್ಲಿ ಎಲ್ಲಾ ಮುಖ್ಯ ದೇವತಾ ಚಿತ್ರಗಳನ್ನು ಚಿತ್ರಿಸುವರು. ಸಿಂಹಗಳ ಚಿತ್ರಿಕೆಗಳು, ಜಂತ್ರ-ಕಂಭಗಳು ಇರುತ್ತವೆ. ಕುಸುರಿ ಕೆಲಸಗಳು ಅಭಿವ್ಯಕ್ತವಾಗಿರುತ್ತವೆ.

ಕಂಕಣದ ಮೇಲ್ಭಾಗವನ್ನು 'ವಿಸ್ತಾರ' ಎನ್ನುತ್ತಾರೆ. ಈ ಭಾಗ ವಿಶಾಲ ವಾಗಿರುತ್ತದೆ. 'ಇಲ್ಲಿ ಅಷ್ಟ ದಿಕ್ಪಾಲಕರು ', ನವ ಗ್ರಹಗಳು, ಸಪ್ತ ಮಾತೃಕೆಯರು, ಪಂಚವಂಶಿತಿಯರು, ಚತುರ್ವಂಶಿತಿಯರು, ಸಖಿಯರು, ದ್ವಾರಪಾಲಕರು, ಬಳ್ಳಿಸಾಲು, ತೋರಣ ಸಾಲು, ಗಂಟೆಗಳು, ದೇವತಾ ಚರಿತ್ರೆ, ದಶಾವತಾರ ಮುಂತಾದ ಚಿತ್ರಿಕೆಗಳಿರುತ್ತವೆ. ವಿಸ್ತಾರದ ಮೇಲ್ಭಾಗದ ಆಸನ 'ದೇವಾಸನ'. ಇದು ವಿಸ್ತಾರಕ್ಕಿಂತಲೂ ಚಿಕ್ಕದಾಗಿರುತ್ತದೆ. 'ಇಲ್ಲಿ ದೇವರನ್ನು ಕೂರಿಸುತ್ತಾರೆ. ಮುಂದೆ ಅರುಣ ಇರುತ್ತಾನೆ. ಕುದುರೆಗಳಿರುತ್ತವೆ. ದೇವಾಸನದಲ್ಲಿ ದೇವರು ಕೂರುವ ವ್ಯವಸ್ಥೆಯನ್ನು ಕಲ್ಪಿಸಬೇಕಾಗುತ್ತದೆ. ಕೆಳಗಡೆ ವಿಸ್ತಾರದಲ್ಲಿ ಸುತ್ತಲೂ ಜಾಗವಿರುತ್ತದೆ. ಕಬ್ಬಿಣದ ಸಹಾಯದಿಂದ ಈ ಭಾಗ ಬಹಳ ಬಿಗಿಯಾಗಿರುತ್ತದೆ. ದೇವಾಸನದಲ್ಲಿ ಕುಸುರಿ ಕೆಲಸ ಮತ್ತು ಕೆಲವು ವಿಗ್ರಹಗಳನ್ನು ಸಹ ಅಳವಡಿಸಿರಬಹುದು. ದೇವಾಸನದ ನಂತರ 'ಮಂಟಪ' ಇರುತ್ತದೆ. ಈ ಮೇಲ್ಮಂಟಪವು 8 ಕಂಬಗಳಿಂದ 32 ಕಂಬಗಳನ್ನು ಒಳಗೊಂಡಿರಬಹುದು. ಮಂಟಪದ ಮೇಲ್ಭಾವಣಿಯು ಒಂದು ಹಂತದಿಂದ ಏಳು ಹಂತದವರೆಗೆ ಇರುತ್ತದೆ. ಚಿಕ್ಕ ರಥಗಳಲ್ಲಿ ಒಂದರಿಂದ ಮೂರು ಮಂಟಪಗಳಿದ್ದರೆ ಅತಿದೊಡ್ಡ ರಥಗಳಲ್ಲಿ ಏಳು ಮಂಟಪಗಳಿರುತ್ತವೆ.

ರಥದ ಮೇಲ್ಮಂಟಪವನ್ನು ಸಾದಾ ಮಂಟಪ, ಹಲಗೆಯ ಮಂಟಪ, ಬಟ್ಟೆಯ ಮಂಟಪ ಹೀಗೆ ಬೇರೆ ಬೇರೆ ರೀತಿಯಲ್ಲಿ ತಯಾರಿಸುತ್ತಾರೆ. ಕೆಲವು ಮಂಟಪಗಳು ಪ್ರತಿ ವರ್ಷವೂ ಬಿಚ್ಚಿಡುವಂತೆ ಇರುತ್ತವೆ. ಇನ್ನು ಕೆಲವು ರಥದೊಂದಿಗೆ ಸಂಯೋಜಿ ಸಲ್ಪಟ್ಟಿರುತ್ತವೆ. ರಥದ ಕಂಬಗಳು, ಆರ್ಚ್‌ಗಳು, ಮಂಟಪಗಳ ಮೇಲೆಲ್ಲಾ ಬಳ್ಳಿಸಾಲು, ತೋರಣ ಸಾಲು, ದಳಗಳು, ಪುಷ್ಪಗಳು, ನರ್ತಕಿಯರು ಇವನ್ನೆಲ್ಲಾ ಚಿತ್ರಿಸಿ ಕುಸುರಿ ಕೆಲಸ ಮಾಡಲು ಶಿಲ್ಪಿಗೆ ಅವಕಾಶವಿದೆ. ರಥದ ಕೆಲಸವು ಪೂರ್ಣವಾದ ಮೇಲೆ ರಥದ ಮೇಲೆ ಕಳಶವನ್ನಿರಿಸಿಸಲು ವ್ಯವಸ್ಥೆ ಮಾಡಲಾಗುತ್ತದೆ. ರಥಕ್ಕೆ ಬಳಸಲಾಗಿರುವ ಮರಗಳ ಗುಣವನ್ನಾಧರಿಸಿ ಪಾಲಿಷ್ ಮತ್ತು ಬಣ್ಣವನ್ನು ಕೊಟ್ಟು ರಥ ನಿರ್ಮಾಣ ಕೆಲಸ ಪೂರ್ಣಗೊಳಿಸುತ್ತಾರೆ.

ಪರಮೇಶ್ವರಾಚಾರ್ಯರು ಕೆಲವು ರಥಗಳಿಗೆ ಚಕ್ರಗಳು ಸರಾಗವಾಗಿ

ಉರುಳಲು ಸಹಾಯಕವಾಗುವಂತೆ ಕಬ್ಬಿಣದ ಬುಷ್‌ಬೇರಿಂಗ್‌ಗಳನ್ನು ಬಳಸಿದ್ದಾರೆ. ದೊಡ್ಡ ದೊಡ್ಡ ಬೋಲ್ಟ್-ನಟ್ಟುಗಳನ್ನು ಬಳಸಿದ್ದಾರೆ. ಚಕ್ರಗಳಿಗೆ ಸವಕಳಿ ಬಾರದಂತೆ ಸುತ್ತಲೂ ಕಬ್ಬಿಣದ ಬಳೆಗಳನ್ನು ಬಳಸಿದ್ದಾರೆ. ರಥವು ತಿರುವುಗಳನ್ನು ಪಡೆದುಕೊಳ್ಳಲು ಸಹಾಯಕವಾಗುವಂತೆ ಸ್ಟೀರಿಂಗ್‌ಗಳನ್ನು ಮತ್ತು ಬ್ರೇಕ್‌ಗಳನ್ನು ಅಳವಡಿಸಿರುತ್ತಾರೆ.

ಎಲ್ಲಾ ವಿಧವಾದ ವಾಸ್ತು-ಶಿಲ್ಪಗಳನ್ನು ಶ್ರೇಯಸ್ಸಿಗಾಗಿ ಸಕಲ ಪೂಜೆಗಳನ್ನು ನಡೆಸಿದ ನಂತರವೇ ಒಪ್ಪಿಸುವುದು ಧಾರ್ಮಿಕ ವಿಧಿಯಾಗಿರುತ್ತದೆ. ಆದ್ದರಿಂದ ದೇವಾಲಯಗಳು, ರಥಗಳು, ದೇವತಾ ವಿಗ್ರಹಗಳು, ವಾಸಸ್ಥಾನಗಳು, ವಾಹನ, ಆಯುಧ, ಆಭರಣ ಇತ್ಯಾದಿಗಳನ್ನೆಲ್ಲಾ ಸರ್ವ ರೀತಿಯಲ್ಲಿಯೂ ಪೂಜಿಸಿ , ಒಪ್ಪಿಸಲಾಗುತ್ತದೆ. ಹಾಗೆಯೇ ರಥವನ್ನು ನಿರ್ಮಿಸಿದ ಮೇಲೆಯೂ ಎಲ್ಲ ಧಾರ್ಮಿಕ ವಿಧಿಗಳ ಸಹಿತ ರಥವನ್ನು ಪೂಜಿಸಲಾಗುತ್ತದೆ. ಇದೇ ಸಂದರ್ಭದಲ್ಲಿಯೇ ಅರ್ಚಕರ ಮಾರ್ಗದರ್ಶನದೊಂದಿಗೆ ಊರಿನ ಪ್ರಮುಖರು ಶಿಲ್ಪಿಯ ಪೂಜೆಯನ್ನು ನೆರವೇರಿಸುತ್ತಾರೆ.

ರಥಗಳನ್ನು ಪ್ರತಿಷ್ಠಾಪಿಸುವ ಧಾರ್ಮಿಕ ವಿಧಿಗಳು ಈ ರೀತಿಯಾಗಿವೆ: 1. ಗಣಪತಿ ಪೂಜಾ 2. ಪುಣ್ಯಾಹ ವಾಚನ 3. ಆಚಾರ್ಯ ಋತ್ವಿಗ್ವರಣ 4. ನಾಂದಿ 5. ಅಂಕುರಾರ್ಪಣ 6. ಅಗ್ನಿ ಪರೀಕ್ಷೆ 7. ನವಗ್ರಹ ಪೂಜಾ 8. ಪಂಚಬ್ರಹ್ಮ ಪೂಜಾ 9. ವಾಸ್ತು ಪೂಜಾ 10. ಕಲಶ ಪೂಜಾ 11. ಜಲಾಧಿವಾಸ 12. ಕ್ಷೀರಾಧಿವಾಸ 13. ಧಾನ್ಯಾದಿವಾಸ 14. ಶಯ್ಯಾದಿ ವಾಸ 15. ಹೋಮ 16.ಪ್ರಾಣ ಪ್ರತಿಷ್ಠೆ 17. ನೇತ್ರೋನ್ಮಿಲನ 18. ಕಲಾವಾಹನ 19. ಧೇನು ದಶಾನ 20. ಬಲಿಹರಣ 21. ಪೂರ್ಣಾಹುತಿ 22. ಕುಂಬಾಭಿಷೇಕ 23. ಮಹಾ ಮಂಗಳಾರತಿ 24. ರಥದ ಮೇಲೆ ದೇವರನ್ನು ಕೂರಿಸುವುದು.

ಮಹಾ ಮಂಗಳಾರತಿ ಆದ ನಂತರ ರಥವನ್ನು ಮಾಡಿದಂತಹ ಶಿಲ್ಪಿಯಿಂದ ರಥವನ್ನು ಮಾಡಿಸಿದಂತಹ ಪುರ ಪ್ರಮುಖ ಅಥವಾ ದೇವಾಲಯದ ಆಡಳಿತ ಮಂಡಳಿಯ ಪ್ರಮುಖರಿಗೆ ಒಪ್ಪಿಸಿ ರಥದಲ್ಲಿ ದೇವರನ್ನು ಕೂರಿಸಿ, ಶಂಖ, ಜಾಗಟೆ, ಕಹಳೆ, ನಗಾರಿ, ವಾದ್ಯಗೋಷ್ಠಿ ಡೊಳ್ಳು ಕುಣಿತ, ನಂದಿಕೋಲು, ಕರಡಿ ಕುಣಿತ, ವೀರಗಾಸೆ ಕುಣಿತ, ಕೋಲಾಟ ಇತ್ಯಾದಿ ಮೇಳದೊಂದಿಗೆ ರಥವನ್ನು ಎಳೆಯುತ್ತಾರೆ. ಇಂತಹ ರಥವುಳ್ಳ ದೇವಾಲಯ ಮತ್ತು ಗ್ರಾಮಗಳು ಸಕಲ ರೀತಿಯೂ ವೃದ್ಧಿಗೊಳ್ಳುತ್ತಾ ಬಂದಿವೆ.

ಪರಮೇಶ್ವರಾಚಾರ್ಯರು ತಯಾರಿಸಿದ ರಥಗಳಿಗೆ ವಿದ್ವಾನ್ ವೇದ ಬ್ರಹ್ಮರ್ಷಿ ವೀರ ರಾಘವ ಶರ್ಮ, ವೇದ ಬ್ರಹ್ಮರ್ಷಿ ತಿಪ್ಪಣ್ಣಾಚಾರ್ಯ, ಬಾಳಾಚಾರ್ಯ, ವೇದ ಬ್ರಹ್ಮರ್ಷಿ ಸತ್ಯನಾರಾಯಣ, ವೇದ ಬ್ರಹ್ಮರ್ಷಿ ಮುಕುಂದಾಚಾರ್ಯ, ವೇದ ಬ್ರಹ್ಮರ್ಷಿ ವಿಶ್ವಜ್ಞಾಚಾರ್ಯ ಇವರುಗಳು ಶಾಸ್ತ್ರೋಕ್ತವಾಗಿ ಶ್ರದ್ಧೆ ಭಕ್ತಿಗಳಿಂದ ರಥ ಮತ್ತು ದೇವತಾ ಪ್ರತಿಷ್ಠಾಪನೆಯನ್ನು ನೆರವೇರಿಸಿಕೊಡುತ್ತಾ ಬಂದಿದ್ದಾರೆ.

ಕನ್ನಡ ನಾಡಿನ ಶಿಲ್ಪಿಗಳು ಹೇಗೆ ಯುಗ ಯುಗಾಂತರಕ್ಕೆ ನಿಲ್ಲುವ ಕಲಾಕೃತಿಗಳನ್ನು ನೀಡಿ ಕಲಾವಂತಿಕೆಯಿಂದ ಮೆರೆದಿದ್ದಾರೋ ಹಾಗೆಯೇ ತಮ್ಮ ತಮ್ಮ ಹೃದಯ ಶ್ರೀಮಂತಿಕೆಯನ್ನು ಸಂಪನ್ನಗೊಳಿಸಿದ ಸಂತತಿವಂತರು. ರಾಜಮಹಾರಾಜರ ಕಾಲದಿಂದ ದೇಗುಲಗಳಲ್ಲಿ, ಮಠಮಾನ್ಯಗಳಲ್ಲಿ ನಡೆಯುತ್ತಿದ್ದ ರಥಗಳ ಶಿಲ್ಪ ಕೈಂಕರ್ಯವು ಇಂದಿಗೂ ಭಾರತೀಯ ಸಂತತಿಯಿಂದೊಡಗೂಡಿದ ಪ್ರಜಾಸತ್ತೆಯ ವ್ಯವಸ್ಥೆಯಲ್ಲೂ ಆಧ್ಯಾತ್ಮಿಕ ವಿಜ್ಞಾನದ ಸಂಕೇತಗಳಂತಿರುವ ಈ ಶಿಲ್ಪ ಸಂವರ್ಧನೆಯ ಕಾರ್ಯ ಸಾರ್ವಜನಿಕರಿಂದಲೂ ಆಗುಮಾಡಿಸಿ ರಥಶಿಲ್ಪವು ಉತ್ತರೋತ್ತರ ವಿಸ್ತರಿಸುತ್ತಿದೆ.

## ಶಿಲಾ ಶಿಲ್ಪ

ಪರಮೇಶ್ವರಾಚಾರ್ಯರು ಅನೇಕ ದೇವಾಲಯಗಳಿಗೆ ಕುಸುರಿ ಕೆಲಸವುಳ್ಳ ಮರದ ಬಾಗಿಲುಗಳನ್ನು ಮಾಡಿಕೊಟ್ಟಿರುತ್ತಾರೆ. ಸಾಗವಾನಿಯಲ್ಲಿ ವಿಶ್ವಕರ್ಮ ಪರಬ್ರಹ್ಮನ ಐದು ಮುಖಗಳ ಮೂರ್ತಿಯನ್ನು ಬಹು ಸುಂದರವಾಗಿ ಕೆತ್ತಿದ್ದಾರೆ. ಹೀಗೆ ರಥಶಿಲ್ಪದ ಜೊತೆಗೆ ಕಾಷ್ಠ ಶಿಲ್ಪವನ್ನು ಮಾಡಿದ್ದಾರೆ. ಪರಮೇಶ್ವರಾಚಾರ್ಯರು ಶಿಲಾ ಶಿಲ್ಪದಲ್ಲೂ ಅದ್ಭುತ ಸಾಧನೆ ಮಾಡಿದ್ದಾರೆ. ಇದುವರೆವಿಗೂ ಐವತ್ತಕ್ಕೂ ಹೆಚ್ಚು ಶಿಲಾವಿಗ್ರಹಗಳನ್ನು ಇವರು ರಚಿಸಿದ್ದಾರೆ. ಶಿಲಾಮೂರ್ತಿಗಳ ರಚನೆಗೆ ಕೃಷ್ಣಶಿಲೆ ಅತ್ಯಂತ ಪ್ರಶಸ್ತವಾದುದು ಎಂದು ಇವರು ಅಭಿಪ್ರಾಯಪಡುತ್ತಾರೆ. ಕೃಷ್ಣಶಿಲೆಯಲ್ಲಿಯೇ ದೇವತಾ ಮೂರ್ತಿಗಳನ್ನು ರಚಿಸುತ್ತಾರೆ.

ಪಂಚಾಂಗವನ್ನು ನೋಡಿ ಮುಹೂರ್ತವನ್ನಿಟ್ಟುಕೊಂಡು ದೇವತಾ ಮೂರ್ತಿಯ ಕೆತ್ತನೆಗೆ ಪ್ರಾರಂಭಿಸುತ್ತಾರೆ. ಯಾವ ದೇವತಾ ಮೂರ್ತಿಯನ್ನು ಮಾಡಬೇಕಾದರೂ ಕಾಶ್ಯಪ ಶಿಲ್ಪಶಾಸ್ತ್ರದ ಪ್ರಕಾರ ಆಯಾ ದೇವತೆಯ ವರ್ಣನೆಯನ್ನು ನೀಡುವ ಅತ್ಯಂತ ಪ್ರಾಚೀನ ಶ್ಲೋಕವನ್ನು ಆಧರಿಸಿ ವಿಗ್ರಹವನ್ನು ರೂಪುಗೊಳಿಸುತ್ತಾರೆ. ಉದಾಹರಣೆಗೆ,

ನಾಲ್ಕು ಕೈಗಳನ್ನು ಹೊಂದಿದ ಬಿಳಿ ತಾವರೆ ಮೇಲೆ ಕುಳಿತಿರುವ, ಜಟಾಮುಕುಟ ಇರುವ, ಬಿಳಿ ಬಟ್ಟೆಯನ್ನು ಉಟ್ಟಿರುವ, ಯಜ್ಞೋಪವೀತ ಧರಿಸಿರುವ, ಮುತ್ತಿನ ಹಾರ ಇರುವ, ಮೂರು ಕಣ್ಣುಗಳುಳ್ಳ ಸೌಂದರ್ಯಶಾಲಿಯಾಗಿರುವ ದೇವತೆಯು ಅಕ್ಷಮಾಲೆ, ಮುದ್ರೆಯನ್ನು, ಎಡದಲ್ಲಿ ಪುಸ್ತಕ ಮತ್ತು ಕಮಂಡಲವನ್ನು ಧರಿಸಿ ಋಗ್, ಯಜಸ್, ಸಾಮ, ಅರ್ಥರ್ವ ವೇದಗಳಿಂದಲೂ, ಋಷಿಗಳಿಂದಲೂ ಸೇವಿಸಲ್ಪಡುತ್ತಿರುತ್ತಾಳೆ. ಈಕೆಯನ್ನು ಸರಸ್ವತಿ ಎನ್ನುತ್ತಾರೆ. ಪ್ರಾಚೀನ ಸಂಸ್ಕೃತ ಶ್ಲೋಕವನ್ನಾಧರಿಸಿದ ಇಂತಹ ವಿವರಗಳ ಆಧಾರದ ಮೇಲೆ ಶಿಲ್ಪಿಗಳು ಮೂರ್ತಿ ಕೆತ್ತನೆಗೆ ಪ್ರಾರಂಭಿಸುತ್ತಾರೆ.

ಸಾಮಾನ್ಯವಾಗಿ ಅಥರ್ವಣವೇದ, ಮಹಾಭಾರತ, ಪುರಾಣಗಳು, ರಾಮಾಯಣ, ಶಿಲ್ಪಶಾಸ್ತ್ರಗ್ರಂಥಗಳಿಂದ ಆಯ್ದ ದೇವತಾ ವರ್ಣನೆಯನ್ನು ಅನುಸರಿಸಿ ದೇವತಾ ಮೂರ್ತಿಯನ್ನು ರೂಪಿಸಲಾಗುತ್ತದೆ. ಪರಮೇಶ್ವರಾಚಾರ್ಯರು ಆಧಾರಸಹಿತವಾಗಿ ರಚಿಸಿರುವ ಇಂತಹ ಅನೇಕ ಮೂರ್ತಿಗಳನ್ನೊಳಗೊಂಡ ಪಟ್ಟಿಯನ್ನು ಈ ಮುಂದಿನಂತೆ ಕಾಣಬಹುದು.

ಇವರು ಮೊಟ್ಟಮೊದಲಿಗೆ ಚಿತ್ರದುರ್ಗದ ಕಾಳಿಕಾ ದೇವಾಲಯಕ್ಕೆ ಎರಡೂವರೆ ಅಡಿ ಎತ್ತರದ ಶ್ರೀ ಕಾಳಿಕಾದೇವಿ ವಿಗ್ರಹವನ್ನು ರಚಿಸಿಕೊಟ್ಟರು. ಆಮೇಲೆ 1948ರಲ್ಲಿ ಚಿಕ್ಕಮಗಳೂರು ಜಿಲ್ಲೆಯ ತರೀಕೆರೆಗೆ ಶ್ರೀ ಚೌಡೇಶ್ವರಿ (ಶ್ರೀ ಬನಶಂಕರಿ) ವಿಗ್ರಹ (ಐದು ಅಡಿ); 1975ರಲ್ಲಿ ಮೈಸೂರಿನ ಒಂಟಿಕೊಪ್ಪಲ್‌ಗೆ ಅಂಬೆಗಾಲು ಕೃಷ್ಣ ಇದೇ ವರ್ಷದಲ್ಲಿ ಶಿವಮೊಗ್ಗಕ್ಕೆ ಶ್ರೀ ವೀರಭದ್ರ ಸ್ವಾಮಿ ದೇವರು (ಮೂರುವರೆ ಅಡಿ), ಶ್ರೀ ವಿನಾಯಕ ದೇವರು (ಮೂರು ಅಡಿ ಎತ್ತರದ); 1987ರಲ್ಲಿ ಬುಕ್ಕಾಂಬುಧಿಗೆ ಶ್ರೀ ವಿನಾಯಕ ದೇವರು (ಎತ್ತರ ಎರಡೂವರೆ ಅಡಿ) 1987ರಲ್ಲಿ ಶಿವಮೊಗ್ಗ ಜಿಲ್ಲೆ ಹೊಳಲೂರಿಗೆ ಶ್ರೀ ಪರಮಕಾಳಿದೇವಿ, ವಿಗ್ರಹ ( ಎತ್ತರ ಎರಡೂವರೆ ಅಡಿ); ಶ್ರೀ ವೀರಭದ್ರ ಸ್ವಾಮಿ ವಿಗ್ರಹ (ಮೂರುವರೆ ಅಡಿ); 1988ರಲ್ಲಿ ಚನ್ನಗಿರಿಗೆ ಒಂದು ಅಡಿ ಎತ್ತರದ ಮದನಿಕೆ; 1988ರಲ್ಲೇ ಚನ್ನಗಿರಿ ತಾಲ್ಲೂಕು ಚಿರಡೋಣಿಗೆ ಶ್ರೀ ಮಹಾ ಕಾಳಿಕಾಂಬ ವಿಗ್ರಹ (ಎರಡೂವರೆ ಅಡಿ); 1989ರಲ್ಲಿ ಶಿವಮೊಗ್ಗ ಜಿಲ್ಲೆ ಕಣಿವೆ ಬಿಳಚಿಗೆ ಶ್ರೀ ಅಂಬಾ ಭವಾನಿ ವಿಗ್ರಹ (ವಿಗ್ರಹ) (ನಾಲ್ಕೂವರೆ ಅಡಿ); ಇದೇ ವರ್ಷದಲ್ಲಿ ಮೊಳಕಾಲ್ಮೂರು ತಾಲ್ಲೂಕಿನ ಕೊಂಡ್ಲಹಳ್ಳಿ ತಿಪ್ಪೇರುದ್ರಸ್ವಾಮಿ ದೇವಾಲಯಕ್ಕೆ ಶ್ರೀ ತಿಪ್ಪೇರುದ್ರ ಸ್ವಾಮಿ ವಿಗ್ರಹ (ನಾಲ್ಕೂವರೆ ಅಡಿ); 1990ರಲ್ಲಿ ಚಿತ್ರದುರ್ಗ ಜಿಲ್ಲೆ ಚಳ್ಳಕೆರೆಗೆ ಶ್ರೀ ಕುಮಾರ ಸ್ವಾಮಿ, ವಿನಾಯಕ ವಿಗ್ರಹ (ಎರಡೂವರೆ ಅಡಿ); 1990 ಶಿವಮೊಗ್ಗ ಜಿಲ್ಲೆ ಪೆನ್ನಸಮುದ್ರಕ್ಕೆ 6.2

ಅಡಿಗಳಷ್ಟು ಎತ್ತರದ ಶ್ರೀ ಮರಿಯಮ್ಮ, ಸೇವಾಲಾಲ್ ವಿಗ್ರಹ; 1991ರಲ್ಲಿ ಚಿತ್ರದುರ್ಗ ಜಿಲ್ಲೆ ತುರುವನೂರು ಆಂಜನೇಯ ದೇವಾಲಯಕ್ಕೆ ಮೂರು ಅಡಿ ಎತ್ತರದ ಶ್ರೀ ಆಂಜನೇಯ ವಿಗ್ರಹ; ಬಳ್ಳಾರಿಗೆ ಒಂದೂವರೆ ಅಡಿ ಎತ್ತರದ ಶ್ರೀ ವೇಣುಗೋಪಾಲ ವಿಗ್ರಹ; ಹಾಸನ ಜಿಲ್ಲೆ ಅರಸೀಕೆರೆಗೆ 5 ಅಡಿ ಎತ್ತರದ ಶ್ರೀ ವೆಂಕಟರಮಣ ಸ್ವಾಮಿ ವಿಗ್ರಹ ಮತ್ತು 4 ಅಡಿ ಎತ್ತರದ ಶ್ರೀ ಲಕ್ಷ್ಮೀದೇವಿ ವಿಗ್ರಹ ಮತ್ತು ಮೂರೂವರೆ ಅಡಿ ಎತ್ತರದ ಶ್ರೀ ಗುಂಡಮ್ಮ ದೇವಿ ವಿಗ್ರಹ; 1984ರಲ್ಲಿ ಕಡೂರು ತಾಲ್ಲೂಕು ಮುತ್ತಾಣಿಗೆರೆಗೆ ಎರಡೂವರೆ ಅಡಿ ಎತ್ತರದ ಶ್ರೀ ಮರುಳ ಸಿದ್ಧೇಶ್ವರ (ಲಿಂಗ) ವಿಗ್ರಹ; ಶಿವಮೊಗ್ಗ ಜಿಲ್ಲೆ ಚಿಕ್ಕೂಲಿಗೆರೆಗೆ 1995ರಲ್ಲಿ ಮೂರು ಅಡಿ ಎತ್ತರದ ಈಶ್ವರ ಲಿಂಗ ಮತ್ತು ಬಸವ; 1996ರಲ್ಲಿ ಚನ್ನಗಿರಿ ತಾಲ್ಲೂಕಿನ ಕಂಸಾಗರಕ್ಕೆ ಶ್ರೀ ವೀರಭದ್ರ ಸ್ವಾಮಿ ದೇವರ ನಾಲ್ಕೂವರೆ ಅಡಿ ಎತ್ತರದ ವಿಗ್ರಹ 1997ರಲ್ಲಿ ಭದ್ರಾವತಿಗೆ ಶ್ರೀ ವಿನಾಯಕ ವಿಗ್ರಹ (ನಾಲ್ಕೂವರೆ ಅಡಿ). ಇದೇ ವರ್ಷ ಚನ್ನಗಿರಿ ತಾಲ್ಲೂಕಿನ ಕಕ್ಕೆದೂರಿಗೆ ನಾಲ್ಕೂವರೆ ಅಡಿ ಎತ್ತರದ ಶ್ರೀ ವೀರಭದ್ರ ಸ್ವಾಮಿ ವಿಗ್ರಹ; 1998ರಲ್ಲಿ ಭದ್ರಾವತಿ ತಾಲ್ಲೂಕಿನ ಬಾಬಳ್ಳಿಗೆ ನಾಲ್ಕೂವರೆ ಅಡಿ ಎತ್ತರದ ಶ್ರೀ ರಂಗನಾಥ ಸ್ವಾಮಿ ವಿಗ್ರಹ, ಇದೇ ವರ್ಷ ಆಂಧ್ರ ಪ್ರದೇಶದ ಕಣೇಕಲ್‌ಗೆ ನಾಲ್ಕೂವರೆ ಅಡಿ ಎತ್ತರದ ಶ್ರೀ ಕನ್ನಿಕಾ ಪರಮೇಶ್ವರಿ ವಿಗ್ರಹವನ್ನು ರಚಿಸಿಕೊಟ್ಟು ಅಸಾಧಾರಣ ಪ್ರತಿಭೆಯನ್ನು ವ್ಯಕ್ತಪಡಿಸಿದ್ದಾರೆ. ಇವಲ್ಲದೆ ಇವರು ಕಡೆದು ಕೊಟ್ಟಿರುವ ಚಿಕ್ಕ-ಪುಟ್ಟ ಗಾತ್ರದ ವಿಗ್ರಹಗಳಿಗೆ ಲೆಕ್ಕವಿಲ್ಲ.

ಕೃಷ್ಣಶಿಲೆಯಲ್ಲಿ ಪರಮೇಶ್ವರಾಚಾರ್ಯರು ಮಾನವ ಪುತ್ಥಳಿ (ಸ್ಟ್ಯಾಚ್ಯು)ಗಳನ್ನು ಮಾಡಿರುತ್ತಾರೆ. 1960ರಲ್ಲೇ ತಮ್ಮ ಸ್ವಂತ ಊರಾದ ಗೊಪ್ಪೇನ ಹಳ್ಳಿಯಲ್ಲಿ ಒಂದೂವರೆ ಅಡಿ ಎತ್ತರದ ಶ್ರೀ ಸಿದ್ಧಾರೂಢ ಸ್ವಾಮಿಗಳ ಕುಳಿತ ವಿಗ್ರಹವನ್ನು ಕಡೆದು ಪ್ರತಿಷ್ಠಾಪಿಸಿರುತ್ತಾರೆ. 1982ರಲ್ಲಿ ಸಿರಿಗೆರೆ ತರಳಬಾಳು ಮಠದಲ್ಲಿ ಎರಡೂವರೆ ಅಡಿ ಎತ್ತರದ ಶ್ರೀ ಕಾಶಿ ಮಹಾಲಿಂಗ ಸ್ವಾಮಿಗಳ ಪುತ್ಥಳಿಯನ್ನು ಕಡೆದು ಪ್ರತಿಷ್ಠಾಪಿಸಿರುತ್ತಾರೆ. 1986ರಲ್ಲಿ ಗೊಪ್ಪೇನಹಳ್ಳಿ ಪ್ರೌಢಶಾಲೆಯಲ್ಲಿ ಮೂರು ಅಡಿ ಎತ್ತರದ ಶ್ರೀ ತರಳಬಾಳು ಜಗದ್ಗುರು ಶ್ರೀ ಶಿವಕುಮಾರ ಶಿವಾಚಾರ್ಯ ಮಹಾಸ್ವಾಮಿಗಳ ಕುಳಿತ ಭಂಗಿಯ ಪುತ್ಥಳಿಯನ್ನು ಕಡೆದು ಪ್ರತಿಷ್ಠಾಪಿಸಿರುತ್ತಾರೆ.

1986ರಲ್ಲೇ ಎರಡೂವರೆ ಅಡಿ ಎತ್ತರದ ಮರಬನಹಳ್ಳಿ ಶ್ರೀ ಚನ್ನಪ್ಪಗೌಡರ ಬಸ್ಟ್ (ಎದೆಮಟ್ಟದ ಪುತ್ಥಳಿ)ನ್ನು ಚನ್ನಗಿರಿ ತಾಲ್ಲೂಕು ಬಸವಾಪಟ್ಟಣದಲ್ಲಿ; 1988ರಲ್ಲಿ ನಗರ ಸಭಾಧ್ಯಕ್ಷರಾದ ಶ್ರೀ ಕೋಟಿ ಜಂಬಣ್ಣನವರ ಎರಡೂವರೆ ಅಡಿ ಎತ್ತರದ ಪುತ್ಥಳಿಯನ್ನು

ದಾವಣಗೆರೆಯಲ್ಲಿ; ಇದೇ ವರ್ಷ ಶ್ರೀ ಕಂದಗಲ್ ಭಾಗ್ಯಮ್ಮನವರ ಒಂದು ಅಡಿ ಎತ್ತರದ ಬಸ್ಟ್ ಅನ್ನು ಶಿವಮೊಗ್ಗ ಜಿಲ್ಲೆಯಲ್ಲಿ; 1989ರಲ್ಲಿ ಶ್ರೀ ಮಹಾತ್ಮ ಗಾಂಧೀಜಿಯವರ ಬಸ್ಟ ಅನ್ನು (ಎರಡೂವರೆ ಅಡಿ ಎತ್ತರ) ದಾವಣಗೆರೆ ಕೆ.ಟಿ.ಜೆ. ನಗರದಲ್ಲಿ; ಇದೇ ವರ್ಷ ಸ್ವಾತಂತ್ರ್ಯ ಸೇನಾನಿ ಶ್ರೀ ಹರ್ಡೇಕರ್ ಮಂಜಪ್ಪನವರ, ಎರಡೂವರೆ ಅಡಿ ಎತ್ತರದ ಪುತ್ಥಳಿಯನ್ನು ದಾವಣಗೆರೆ ಹರ್ಡೇಕರ್ ಮಂಜಪ್ಪ ಸರ್ಕಲ್‌ನಲ್ಲಿ; 1990ರಲ್ಲಿ ಚಿಕ್ಕಮಗಳೂರು ಜಿಲ್ಲೆ ಬುಕ್ಕಸಾಗರದಲ್ಲಿ ಶ್ರೀ ಮಹಲಿಂಗ ಶಾಸ್ತ್ರಿಗಳ ಎರಡೂವರೆ ಅಡಿ ಎತ್ತರದ ಪುತ್ಥಳಿಯನ್ನು ಪಡೆದು ಪ್ರತಿಷ್ಠಾಪಿಸಿ ಪ್ರಸಿದ್ಧಿಪಡಿಸಿದ್ದಾರೆ.

1992ರಲ್ಲಿ ದಾವಣಗೆರೆಗೆ ಮೂರು ಪ್ರಮುಖ ಪುತ್ಥಳಿಗಳನ್ನು ಕಡೆದುಕೊಟ್ಟಿದ್ದಾರೆ. ಹೀಗೆ ಕಡೆದವುಗಳಲ್ಲಿ ಡಾ|| ಬಿ. ಆರ್. ಅಂಬೇಡ್ಕರ್‌ರವರ ಎರಡೂವರೆ ಅಡಿ ಎತ್ತರದ ಪುತ್ಥಳಿಯನ್ನು ಕೆ.ಇ.ಬಿ ಸರ್ಕಲ್ ನಲ್ಲಿ, ಶ್ರೀ ಮಹಾತ್ಮಾ ಗಾಂಧೀಜಿಯವರ ಎರಡೂವರೆ ಅಡಿ ಎತ್ತರದ ಪುತ್ಥಳಿಯನ್ನು ವಿದ್ಯಾನಗರದಲ್ಲಿ, ಶ್ರೀ ಭಗತ್‌ಸಿಂಗ್‌ರವರ ಎರಡೂವರೆ ಅಡಿ ಎತ್ತರದ ಪುತ್ಥಳಿಯನ್ನೂ (1993) ಪಿ.ಬಿ. ರೋಡ್-ರೈಲ್ವೇ ಬ್ರಿಡ್ಜ್‌ನ ಬಳಿ ಸ್ಥಾಪಿಸಲಾಗಿದೆ.

1996ರಲ್ಲಿ ಶ್ರೀ ತರಳಬಾಳು ಶ್ರೀ ಗುರು ಶಾಂತರಾಜ ದೇಶೀಕೇಂದ್ರ ಮಹಾ ಸ್ವಾಮಿಗಳ ಪುತ್ಥಳಿಯನ್ನು ಸಿರಿಗೆರೆಗೆ ಅಮೃತಶಿಲೆಯಲ್ಲಿ ಕಡೆದುಕೊಟ್ಟು ಅಮೃತ ಶಿಲೆಯ ಕೆಲಸದಲ್ಲೂ ಸೈ ಎನಿಸಿಕೊಂಡಿದ್ದಾರೆ. ಇತ್ತೀಚೆಗೆ ತಮ್ಮ ಮಗ ಮತ್ತು ಸಹಶಿಲ್ಪಿ ಶ್ರೀಕಂಠಾಚಾರ್ಯರಿಗೆ ಮಾರ್ಗದರ್ಶನ ಮಾಡಿ ಕಡೆಸಿದ ಎರಡೂವರೆ ಅಡಿ ಎತ್ತರ ದರ್ಪಣ ಸುಂದರಿಯ ಪುತ್ಥಳಿಯನ್ನು ಬೆಂಗಳೂರಿನ ಎಂ. ಜಿ. ರಸ್ತೆಯ ಕಾವೇರಿ ಕರಕುಶಲ ವಸ್ತುಪ್ರದರ್ಶನದಲ್ಲಿ ಇಡಲಾಗಿದೆ.

ಹೀಗೆ ಶಿಲೆಯಲ್ಲಿ ದೇವತಾ ವಿಗ್ರಹಗಳು, ರಾಷ್ಟ್ರ ನಾಯಕರು, ಸ್ವಾಮೀಜಿಗಳು ಮತ್ತು ಮಾನವ ಪುತ್ಥಳಿಗಳನ್ನು ಕಡೆದುಕೊಟ್ಟು ಶಿಲಾ ಶಿಲ್ಪದಲ್ಲಿ ತಮಗಿರುವ ಶ್ರದ್ಧೆ ಮತ್ತು ಪಾಂಡಿತ್ಯವನ್ನು ಅಭಿವ್ಯಕ್ತಪಡಿಸಿದ್ದಾರೆ. ಇಷ್ಟಲ್ಲದೆ ಲೋಹಶಿಲ್ಪದಲ್ಲಿ ಅವರು ಮಾಡಿರುವ ಸಾಧನೆಯನ್ನು ಮುಂದಿನಂತೆ ಗಮನಿಸಬಹುದು.

## ಲೋಹಶಿಲ್ಪ

ತಾಮ್ರ , ಹಿತ್ತಾಳೆ, ಕಂಚು, ಚಿನ್ನ, ಇಂತಹ ಲೋಹಗಳಲ್ಲಿ ಶಿಲ್ಪಗಳನ್ನು

ರೂಪಿಸುವುದೂ ಸಾಮಾನ್ಯವೇನಲ್ಲ. ಮೊದಲು ಇವುಗಳನ್ನು ಸಂಸ್ಕರಿಸಿ ಹದ ಗೊಳಿಸಿಕೊಳ್ಳಬೇಕು. ನಂತರ ಗಟ್ಟಿಗಳನ್ನಾಗಿ ಮಾಡಿಕೊಳ್ಳಬೇಕು. ತೂಕ ಇತ್ಯಾದಿ ಗುಣಗಳನ್ನು ನೋಡಬೇಕು. ತಯಾರಿಸಬೇಕಾದ ಸಾಮಗ್ರಿಗೆ ಎಷ್ಟು ಕಚ್ಚಾ ಲೋಹ ಅಗತ್ಯವಿದೆ ಎಂಬುದನ್ನು ಹಿಂದಿನ ಅನುಭವದಿಂದ ಕಂಡುಕೊಳ್ಳಬೇಕು. ಆಭರಣಗಳಿಗಾದರೆ ಲೋಹದ ತುಣುಕುಗಳನ್ನು ಆಭರಣ ರೂಪಕ್ಕೆ ಅನುಗುಣವಾಗಿ ಡೈ ಇತ್ಯಾದಿಗಳಿಂದ ರೂಪ ಪರಿವರ್ತಿಸಿ ಅಗತ್ಯವಾದ ಕಡೆಗಳಲ್ಲಿ ಬೆಸುಗೆ ಕೊಟ್ಟು, ಅದರಲ್ಲಿ ಪಾಲಿಷ್ ಕೊಟ್ಟು, ಬಣ್ಣದ ನೀರಿನಲ್ಲಿ ಅದ್ದಿ ಅಂತಿಮವಾಗಿ ಹೊಳಪು ನೀಡಿ ಗಿರಾಕಿಗಳಿಗೆ ನೀಡಬೇಕು.

ತಾಮ್ರ, ಹಿತ್ತಾಳೆ ಅಥವಾ ಕಂಚಿನಲ್ಲಿ ತಯಾರಿಸಲಾಗುವ ಪುತ್ಥಳಿಗಳಿಗೆ ಆಕಾರ ಮತ್ತು ತೂಕ ನಿರ್ಧರಿಸಿದ ಮೇಲೆ ಬೇಕಾಗುವ ಲೋಹದ ಪರಿಮಾಣವನ್ನು ನಿರ್ಧರಿಸಲಾಗುವುದು. ಲೋಹವನ್ನು ಸಂಸ್ಕರಿಸಿ ಇಟ್ಟುಕೊಳ್ಳಲಾಗುವುದು. ಮೊದಲು ಪ್ಲಾಸ್ಟರ್ ಆಫ್ ಪ್ಯಾರಿಸ್‌ನಲ್ಲಿ ಭಾವಚಿತ್ರಕ್ಕೆ ಅನುರೂಪವಾಗಿ ತಯಾರಿಸಲಾಗುವ ಪುತ್ಥಳಿಯ ಪ್ರತಿಮೆಯನ್ನು ಮಾಡಿ ಗ್ರಾಹಕರಿಗೆ ಅದು ಒಪ್ಪಿಗೆಯಾದ ಮೇಲೆ ಅಂತಹದೇ ಪ್ರತಿಕೃತಿಯನ್ನು ಮೇಣದಲ್ಲಿ ತಯಾರಿಸುತ್ತಾರೆ. ಕೆಲವೊಮ್ಮೆ ಗ್ರಾಹಕರಿಗೆ ಲೋಹದ ತೂಕ ಕಡಿಮೆ ಇರಬೇಕೆಂದು ಬಯಸಿದರೆ ಮೇಣದ ಪ್ರತಿಮೆಯ ಒಳಭಾಗದಲ್ಲು ಪುತ್ಥಳಿಯ ರೀತಿಯ ಜೇಡಿಮಣ್ಣು ಕಟ್ಟಿಕೊಳ್ಳುತ್ತಾರೆ. ಆನಂತರ ಪ್ಲಾಸ್ಟರ್ ಆಫ್ ಪ್ಯಾರಿಸ್‌ಗೆ ಹೋಲಿಕೆಯಾಗುವಂತೆ ಮೇಣ ಕಟ್ಟುತ್ತಾರೆ. ಇದರಿಂದ ಟೊಳ್ಳು ವಿಗ್ರಹ, ತಯಾರಿಸಬಹುದು. ಮೇಣದ ಪ್ರತಿಮೆಗೂ ಪ್ಲಾಸ್ಟರ್ ಆಫ್ ಪ್ಯಾರಿಸ್‌ನ ಪ್ರತಿಮೆಗೂ ಸರ್ವ ವಿಧದಲ್ಲೂ ಹೊಂದಾಣಿಕೆ ಯಾಗುವಂತಿರುವುದು. ಆನಂತರ ಮೇಣದ ಪ್ರತಿಮೆಯ ಮೇಲ್ಮೈಗೆ ಹದವಾದ ಜೇಡಿ ಮಣ್ಣು ಮೆತ್ತುತ್ತಾರೆ. ಸಂಪೂರ್ಣ ಗಟ್ಟಿ ವಿಗ್ರಹವನ್ನು ಮಾಡಬೇಕಾದರೆ ವಿಗ್ರಹದಷ್ಟೇ ಗಾತ್ರದ ಮೇಣದ ಪ್ರತಿಮೆಯನ್ನು ತಯಾರಿಸಿ ಅದಕ್ಕೆ ಜೇಡಿಮಣ್ಣು ಕಟ್ಟಿ, ಬಿಸಿ ಮಾಡಿ ಅದರಲ್ಲಿರುವ ಮೇಣವು ಕರಗಿ ಹೊರಬಂದ ಮೇಲೆ ಆ ಜಾಗಕ್ಕೆ ಲೋಹ ರಸವನ್ನು ಹುಯ್ಯಬೇಕು. ಆಗ ಗಟ್ಟಿ ವಿಗ್ರಹ ತಯಾರಾಗುತ್ತದೆ. ಲೋಹ ರಸವು ಅಂತರ್ಗತವಾಗಿ ಪುತ್ಥಳಿರೂಪಕ್ಕೆ ತಿರುಗಿದ ಮೇಲೆ ಜೇಡಿ ಮಣ್ಣಿನ ಮೆತ್ತಿಗೆಯ ಮೇಲೆ ನೀರು ಸುರಿದು, ಮಣ್ಣಿನ ಪದರವನ್ನು ಬಡಿದು ಹೊರ ತೆಗೆಯುತ್ತಾರೆ. ಆಗ ಸಿದ್ಧಗೊಂಡ ಲೋಹದ ಪುತ್ಥಳಿ ಕಾಣಿಸುತ್ತದೆ. ಲೋಹದ ಪುತ್ಥಳಿಯ ಓರೆಕೋರೆಗಳನ್ನು ತಿದ್ದಿ, ನಯಗೊಳಿಸಿ ಪಾಲಿಷ್ ಕೊಡುತ್ತಾರೆ. ಆನಂತರ ಅದನ್ನು

ಗ್ರಾಹಕರಿಗೆ ಒಪ್ಪಿಸುತ್ತಾರೆ. ವಿಗ್ರಹಗಳಿಗೆ ಸೂಕ್ತ ರೀತಿಯಲ್ಲಿ ಸಂಸ್ಕರಿಸಿದ ನಂತರ ಧಾರ್ಮಿಕ ವಿಧಿಗಳೊಂದಿಗೆ ಪ್ರತಿಷ್ಠಾಪಿಸಲಾಗುತ್ತದೆ. ದೇವತಾ ವಿಗ್ರಹಗಳನ್ನು ಸಕಲ ಧಾರ್ಮಿಕ ವಿಧಿಗಳ ನಂತರ ಯುಕ್ತವಾರ, ನಕ್ಷತ್ರ, ತಿಥಿಗಳನ್ನು ನೋಡಿಕೊಂಡು ಪ್ರತಿಷ್ಠಾಪನೆ ಕಾರ್ಯ ನೆರವೇರಿಸಲಾಗುತ್ತದೆ.

ಶಿಲ್ಪಿ ಪರಮೇಶ್ವರಾಚಾರ್ಯರು ಇದುವರೆಗೆ ಮೂರು ಕಂಚಿನ ಮಾನವ ಪ್ರತಿಮೆಗಳನ್ನು ತಯಾರಿಸಿಕೊಟ್ಟಿದ್ದಾರೆ. 1995ರಲ್ಲಿ ದೊಡ್ಡಬಾತಿ ಸಕ್ಕರೆ ಕಾರ್ಖಾನೆಯಲ್ಲಿ ಸ್ಥಾಪಿಸಲು ದಿ॥ ಗಾಂಜಿ ವೀರಪ್ಪನವರ ನಿಂತ ಪ್ರತಿಮೆಯನ್ನು ಎರಡೂವರೆ-ಮೂರು ಕ್ವಿಂಟಾಲ್ ತೂಕದ ಕಂಚಿನಲ್ಲಿ ತಯಾರಿಸಿಕೊಟ್ಟಿರುತ್ತಾರೆ. ಇದು ಆರು ಅಡಿ ಎತ್ತರ ಉಳ್ಳದ್ದು. ಇದೇ ರೀತಿ 1996ರಲ್ಲಿ ಚನ್ನಗಿರಿಯ ತೋಟ ಉತ್ಪನ್ನಗಳ ಮಾರಾಟ ಸಹಕಾರ ಸಂಘದಲ್ಲಿ ಸ್ಥಾಪಿಸಲು ದಿ। ಆರ್. ಮರುಳಪ್ಪನವರ ನಿಂತ ಪ್ರತಿಮೆಯನ್ನು ಮೂರು ಕ್ವಿಂಟಾಲ್ ತೂಕದ ಕಂಚಿನಲ್ಲಿ ತಯಾರಿಸಿಕೊಟ್ಟಿದ್ದಾರೆ. 1998ರಲ್ಲಿ ಶಿವಮೊಗ್ಗದ ಎನ್.ಇ. ಎಸ್ (ರಾಷ್ಟ್ರೀಯ ಶಿಕ್ಷಣ ಸಮಿತಿ)ನಲ್ಲಿ ಸ್ಥಾಪಿಸಲೆಂದು ದಿ। ಎಸ್. ಆರ್. ನಾಗಪ್ಪ ಶ್ರೇಷ್ಠಿಯವರ ನಿಂತ ಭಂಗಿಯ ಪ್ರತಿಮೆಯನ್ನು ತಯಾರಿಸಿ ಕೊಟ್ಟಿದ್ದಾರೆ (ನಾಗಪ್ಪ ಶೆಟ್ಟರು ಎನ್. ಇ. ಎಸ್.ನ. ಸಂಸ್ಥಾಪಕರು). ಈ ಕಂಚಿನ ಪ್ರತಿಮೆಯನ್ನು ಎಂಟು ಅಡಿ ಎತ್ತರಕ್ಕೆ ತಯಾರಿಸಿ ಕೊಟ್ಟಿದ್ದಾರೆ. ಇದು ಐದು ಕ್ವಿಂಟಾಲ್ ತೂಕದ್ದೆಂದು ಶಿಲ್ಪಿ ಶ್ರೀಕಂಠಾಚಾರ್ಯ ಹೇಳಿರುತ್ತಾರೆ.

ಪರಮೇಶ್ವರಾಚಾರ್ಯರು ಚಿನ್ನ-ಬೆಳ್ಳಿ ಕೆಲಸದಲ್ಲಿ ಹೆಸರು ಮಾಡಿದ್ದಾರೆ. ಪಂಚ ಲೋಹದ ದೇವತಾ ವಿಗ್ರಹಗಳನ್ನು ಮಾಡಿಕೊಟ್ಟಿದ್ದಾರೆ. ಪಲ್ಲಕ್ಕಿ, ಪ್ರಭಾವಳಿ, ಮುಖ, ಕಿರೀಟ, ಕವಚಗಳನ್ನು ಮಾಡಿಕೊಟ್ಟು ಈ ಕ್ಷೇತ್ರದಲ್ಲು ಮನ್ನಣೆ ಗಳಿಸಿದ್ದಾರೆ.

1943ರಲ್ಲಿ ಚನ್ನಗಿರಿ ತಾಲ್ಲೂಕು ದೇವರಹಳ್ಳಿಯ ರಂಗನಾಥ ಸ್ವಾಮಿ ದೇವರಿಗೆ 6X4 ಅಡಿ ವಿಸ್ತಾರದ ಬೆಳ್ಳಿಯ ಪಲ್ಲಕ್ಕಿಯನ್ನು ಚಿತ್ತಾರ ಬಿಡಿಸಿ ಮಾಡಿಕೊಟ್ಟಿದ್ದಾರೆ. 1944ರಲ್ಲಿ ಹೊಳಲ್ಕೆರೆ ತಾಲ್ಲೂಕು ಚಿಕ್ಕಜಾಜೂರಿಗೆ ಶ್ರೀ ಬನಶಂಕರಿ ದೇವತೆಯ ಪಂಚ ಲೋಹದ ವಿಗ್ರಹ, ಚಿನ್ನದ ಒಡವೆಗಳು, ಬೆಳ್ಳಿಯ ಛತ್ರಿಗಳನ್ನು ಮಾಡಿಕೊಟ್ಟಿದ್ದಾರೆ. ಚಿತ್ರದುರ್ಗದ ಶ್ರೀ ವೀರಭದ್ರ ದೇವಾಲಯಕ್ಕೆ 1945ರಲ್ಲಿ ಒಂದು ಕೆ.ಜಿ. ತೂಕವುಳ್ಳ ಶ್ರೀ ವೀರಭದ್ರ ಸ್ವಾಮಿ ದೇವರ ಬೆಳ್ಳಿ ಎರಕದ ವಿಗ್ರಹವನ್ನು ಮಾಡಿಕೊಟ್ಟಿದ್ದಾರೆ.

1948ರಲ್ಲಿ ತರೀಕೆರೆ ಗ್ರಾಮ ದೇವತೆಯಾದ ಶ್ರೀ ಬನಶಂಕರಿ ದೇವತೆಯ ಹತ್ತು

ಕೆ.ಜಿ. ತೂಕದ ಪಂಚಲೋಹದ ವಿಗ್ರಹ ಮತ್ತು ಇತರ ಆಭರಣಗಳನ್ನು ತಯಾರಿಸಿಕೊಟ್ಟಿರುತ್ತಾರೆ. ಹಾಗೆಯೇ 1988ರಲ್ಲಿ ಶಿವಮೊಗ್ಗದ ಮರುಳ ಸಿದ್ಧೇಶ್ವರ ದೇವಾಲಯಕ್ಕೆ ಮರುಳ ಸಿದ್ಧೇಶ್ವರ ದೇವರ 5 ಕೆ.ಜಿ. ತೂಕದ ಪಂಚಲೋಹದ ವಿಗ್ರಹವನ್ನು ಮಾಡಿಕೊಟ್ಟಿರುತ್ತಾರೆ. ತಮ್ಮದೇ ಗ್ರಾಮವಾದ ಗೊಪ್ಪೇನಹಳ್ಳಿ ವೀರಭದ್ರ ದೇವಾಲಯಕ್ಕೆ 1988ರಲ್ಲಿ ಒಂದು ಕೆ.ಜಿ. ತೂಕದ ಶ್ರೀ ವೀರಭದ್ರ ದೇವರ ಬೆಳ್ಳಿ ವಿಗ್ರಹ, ಶ್ರೀ ಆಂಜನೇಯ ದೇವಾಲಯಕ್ಕೆ ಶ್ರೀ ಆಂಜನೇಯ ದೇವರ ಒಂದೂವರೆ ಕೆ.ಜಿ ತೂಕದ ಮುಖ, ಬೆಳ್ಳಿ ಕವಚ, ಕಿರೀಟ ಇನ್ನೂ ಮುಂತಾದ ಆಭರಣಗಳನ್ನು ಆಚಾರ್ಯರು ತಯಾರಿಸಿಕೊಟ್ಟಿದ್ದಾರೆ.

ಹೀಗೆ, ಪರಮೇಶ್ವರಾಚಾರ್ಯರು ರಥಶಿಲ್ಪಿ, ಶಿಲಾ ಶಿಲ್ಪ, ಕಾಷ್ಠಶಿಲ್ಪ, ಲೋಹ ಶಿಲ್ಪಗಳಲ್ಲಿ ಅತಿ ಹೆಚ್ಚಿನ ಸಾಧನೆ ಮಾಡಿ ನಾಡಿಗೇ ಹೆಸರು ತಂದಿದ್ದಾರೆ. ಶಿಲ್ಪಿಯಾದವನಿಗೆ ಶಿಲ್ಪಕಾರ್ಯ ಮಾಡಿದ್ದಕ್ಕಾಗಿ ವೇತನ ಕೊಡುವುದು ವಾಡಿಕೆ. ವೇತನವನ್ನು ಶಿಲ್ಪಿ ನಿರ್ಧರಿಸುತ್ತಾನೆ. ಪುಕ್ಕಟೆ ಶಿಲ್ಪಗಳನ್ನು ರಚಿಸಿಕೊಟ್ಟು ಶಿಲ್ಪಿ ಬದುಕಲು ಸಾಧ್ಯವಿಲ್ಲ. ಆದ್ದರಿಂದ ಸೂಕ್ತವೇತನ ಬೇಕೇ ಬೇಕು. ಕೆಲವರು ವೇತನಕ್ಕಿಂತಲೂ ಮಿಗಿಲಾಗಿ ಶಿಲ್ಪಿಯ ಕಲಾವಂತಿಕೆಯನ್ನು ಮೆಚ್ಚಿ ಗೌರವ-ಪ್ರಶಸ್ತಿಗಳನ್ನು ಕೊಡುವುದೂ ಇದೆ. ಕೆಲವೊಮ್ಮೆ ರಾಜಕೀಯ ನಾಯಕರು, ಗಣ್ಯರು, ಮಠಾಧೀಶರು ಶಿಲ್ಪಿಗಳಿಗೆ ಅವರ ಶಿಲ್ಪ ಚಾತುರ್ಯಕ್ಕೆ ಮೆಚ್ಚಿ ಗೌರವ, ಪ್ರಶಸ್ತಿ, ಬಿರುದು, ಕಾಣಿಕೆಗಳನ್ನು ಕೊಡುವುದು, ಸನ್ಮಾನ ಮಾಡುವುದು ಸಂಪ್ರದಾಯವಾಗಿದೆ. ಪ್ರಜಾಸತ್ತೆ ಅರಳುವುದಕ್ಕೂ ಮುಂಚೆ ಅರಸರು ಈ ಕಾರ್ಯವನ್ನು ನೆರವೇರಿಸುತ್ತಿದ್ದರು.

## ಗೌರವ-ಪ್ರಶಸ್ತಿಗಳು

ಶಿಲ್ಪಿ ಎಂ. ಪರಮೇಶ್ವರಾಚಾರ್ಯರಿಗೆ ಅವರ ಸಾಧನೆ, ಕಲಾವಂತಿಕೆ, ಮೇಲ್ಪಂಕ್ತಿಯನ್ನು ಗುರುತಿಸಿ ಅನೇಕ ಗಣ್ಯರು, ಸಂಘ-ಸಂಸ್ಥೆಗಳು ಗೌರವ-ಪ್ರಶಸ್ತಿ, ಶಾಲು-ಹಾರಗಳಿಂದ ಸನ್ಮಾನಗಳನ್ನು ನೀಡಿ ಗೌರವಿಸಿವೆ. ಇವೆಲ್ಲವೂ ಆಚಾರ್ಯರ ನಿಜವಾದ ಅರ್ಹತೆಯನ್ನು ಗಮನಿಸಿ ನೀಡಿದಂತಹವು. ಅವುಗಳ ಸೂಕ್ಷ್ಮ ಅವಲೋಕನ ಈ ರೀತಿಯಾಗಿದೆ.

1974ರಲ್ಲಿ ಮಂಡ್ಯ ಜಿಲ್ಲೆ ಬಿಂಡಿಗನವಿಲೆಗೆ ಶ್ರೀ ಚನ್ನಕೇಶ್ವರ ರಥ ನಿರ್ಮಾಣ ಮಾಡಿಕೊಟ್ಟ ಸಂದರ್ಭದಲ್ಲಿ ಚಲನಚಿತ್ರ ನಿರ್ಮಾಪಕ ರವಿಯವರಿಂದ ಸನ್ಮಾನ ನಡೆಸಿ

ನೆನಪಿನ ಕಾಣಿಕೆ ನೀಡಲಾಯಿತು. 1975ರಲ್ಲಿ ಮೈಸೂರಿನಲ್ಲಿ ಶ್ರೀ ವೆಂಕಟರಮಣ ಸ್ವಾಮಿ ರಥ ನಿರ್ಮಾಣ ಮಾಡಿಕೊಟ್ಟ ಸಮಯದಲ್ಲಿ ಪರಕಾಲ ಮಠದ ಸ್ವಾಮಿಗಳಿಂದ ಮತ್ತು ಟ್ರಸ್ಟಿಯವರಿಂದ ಸನ್ಮಾನ ಮಾಡಲಾಯಿತು. 1978ರಲ್ಲಿ ಉಜ್ಜಯಿನಿಯಲ್ಲಿ ಶ್ರೀ ಮರುಳ ಸಿದ್ಧೇಶ್ವರ ಸ್ವಾಮಿ ದೇವರ ರಥ ನಿರ್ಮಿಸಿಕೊಟ್ಟುದಕ್ಕಾಗಿ ಶ್ರೀ ಸಿದ್ಧೇಶ್ವರ ಸ್ವಾಮಿಗಳಿಂದ ಮತ್ತು ಅಭಿವೃದ್ಧಿ ಸಮಿತಿಯವರಿಂದ ಸನ್ಮಾನ ಮಾಡಲಾಯಿತು.

1979ರಲ್ಲಿ ಹಂಪೆಗೆ ಶ್ರೀ ವಿರೂಪಾಕ್ಷ ಸ್ವಾಮಿ ದೇವರ ರಥ ನಿರ್ಮಿಸಿಕೊಟ್ಟ ಸಂದರ್ಭದಲ್ಲಿ ಕಂಚಿ ಕಾಮಕೋಟಿ ಸರಸ್ವತಿ ಭಾರತಿ ಸ್ವಾಮಿಗಳಿಂದ ಪರಮೇಶ್ವರಾ ಚಾರ್ಯರಿಗೆ ಚಿನ್ನದ ಕಡಗವನ್ನು ಇಟ್ಟು ಸನ್ಮಾನಿಸಲಾಯಿತು.

1982ರಲ್ಲಿ ನಾಯಕನ ಹಟ್ಟಿ ತಿಪ್ಪೇರುದ್ರ ಸ್ವಾಮಿ ದೇವರಿಗೆ ರಥ ನಿರ್ಮಿಸಿಕೊಟ್ಟಿದ್ದಕ್ಕಾಗಿ ಆಗಿನ ಮುಖ್ಯಮಂತ್ರಿ ಶ್ರೀ ಗುಂಡೂರಾವ್‌ರವರಿಂದ ಸನ್ಮಾನ ಮಾಡಲಾಯಿತು. ಮತ್ತು ಶ್ರೀ ಶ್ರೀ ಮಲ್ಲಿಕಾರ್ಜುನ ಮುರುಘರಾಜ ಸ್ವಾಮಿಗಳಿಂದಲೂ ಸನ್ಮಾನ ಮಾಡಲಾಯಿತು.

1984ರಲ್ಲಿ ಬಳ್ಳಾರಿಗೆ ಕಾಳಿ ಕಮತೇಶ್ವರಿ ದೇವತೆಗೆ ರಥ ನಿರ್ಮಿಸಿಕೊಟ್ಟದ್ದಕ್ಕಾಗಿ ಸನ್ಮಾನ ಮಾಡಲಾಯಿತು. 1986ರಲ್ಲಿ ಸೊಂಡೂರಿನ ಶಿವ ಪುರೇಶ್ವರ ಸ್ವಾಮಿ ದೇವರ ರಥ ನಿರ್ಮಾಣ ಮಾಡಿಕೊಟ್ಟದ್ದಕ್ಕಾಗಿ ತರಳಬಾಳು ಜಗದ್ಗುರು ಶ್ರೀ ಶಿವಮೂರ್ತಿ ಶಿವಾಚಾರ್ಯ ಮಹಾಸ್ವಾಮಿಗಳಿಂದ ಮತ್ತು ಉಪರಾಷ್ಟ್ರಪತಿ ಶ್ರೀ ಬಿ.ಡಿ. ಜತ್ತಿಯವರಿಂದ ಸನ್ಮಾನ ಮಾಡಲಾಯಿತು.

1986ರಲ್ಲಿ ಬಸವಾ ಪಟ್ಟಣಕ್ಕೆ (ಚನ್ನಗಿರಿ ತಾಲ್ಲೂಕು) ಶ್ರೀ ಚನ್ನಪ್ಪಗೌಡರ ಪುತ್ಥಳಿ ನಿರ್ಮಿಸಿಕೊಟ್ಟದ್ದಕ್ಕಾಗಿ ದಿ। ಮುಖ್ಯಮಂತ್ರಿ ಜೆ. ಎಚ್. ಪಟೇಲ್ ಮತ್ತು ಗುರುಮೂರ್ತಿ ಎಂಬುವರಿಂದಲೂ ಸನ್ಮಾನ ಮಾಡಲಾಯಿತು. 1987ರಲ್ಲಿ ಹಂಪಿ ವಿದ್ಯಾರಣ್ಯ ಪೀಠದ ಮಹಾ ಸ್ವಾಮಿಗಳವರಾದ ಶ್ರೀ ಮದಭಿನವೋದ್ದಂಡ ನರಸಿಂಹ ಭಾರತಿ ಮಹಾಸ್ವಾಮಿಗಳು 'ಶಿಲ್ಪಿ ಚತುರ' ಎಂಬ ಬಿರುದನ್ನು ನೀಡಿ ವಿಜಯನಗರ ಸಂಸ್ಥಾನದ ಆಸ್ಥಾನ ಶಿಲ್ಪಿಗಳಾಗಿ ನೇಮಕ ಮಾಡಿಕೊಂಡಿರುತ್ತಾರೆ. ಇದು ಅಕ್ಕಯ್ಯಮ್ಮನ ಬೆಟ್ಟ ಬೆಂಗಳೂರಿಗೂ ಅನ್ವಯಿಸುತ್ತದೆ. 1986ರಲ್ಲಿ ಚನ್ನಗಿರಿಯಲ್ಲಿ ಕರ್ನಾಟಕ ರೋಟರಿ ಕ್ಲಬ್ ಗವರ್ನರ್‌ರವರಿಂದ ತಾಲ್ಲೂಕು ಮಟ್ಟದ ಶಿಲ್ಪ ಕಲೆಗಾಗಿ 'ಮೆರಿಟ್ ಅವಾರ್ಡ್' ದೊರೆತಿದೆ. ತರಳಬಾಳು ಶ್ರೀ ಶಿವಕುಮಾರ ಶಿವಾಚಾರ್ಯ ಮಹಾ ಸ್ವಾಮಿಗಳ ಪುತ್ಥಳಿ

ನಿರ್ಮಿಸಿದ್ದಕ್ಕಾಗಿ ಇದೇ 1986ರಲ್ಲಿ ಸಿರಿಗೆರೆ ಬೃಹನ್ಮಠದಲ್ಲಿ ಡಾ|| ಶಿವಮೂರ್ತಿ ಶಿವಾಚಾರ್ಯ ಮಹಾಸ್ವಾಮಿಗಳಿಂದ ಸನ್ಮಾನ ನಡೆಸಲಾಗಿದೆ.

ಶ್ರೀ ಕೆ.ಟಿ. ಜಂಬಣ್ಣನವರ ಪುತ್ಥಳಿ ನಿಮಿಸಿದ್ದಕ್ಕಾಗಿ ದಾವಣಗೆರೆಯಲ್ಲಿ1988ರಲ್ಲಿ ಮಾಜಿ ಮುಖ್ಯಮಂತ್ರಿ ಶ್ರೀ ರಾಮಕೃಷ್ಣ ಹೆಗಡೆ, ಶಾಮನೂರು ಶಿವಶಂಕರಪ್ಪನವರಿಂದ 'ಶಿಲ್ಪಕಲಾ ಪ್ರವೀಣ ' ಎಂಬ ಬಿರುದು ನೀಡಿ ಗೌರವಿಸಲಾಗಿದೆ. ಇದೇ ಸಂದರ್ಭದಲ್ಲಿ ನಗರ ಸಭೆ ಮತ್ತು ಶೀ ಜಂಬಣ್ಣನವರ ಸಂಘದಿಂದ ಸನ್ಮಾನ ನಡೆಸಲಾಗಿದೆ.

1989ರಲ್ಲಿ ಶ್ರೀ ಹರ್ಡೇಕರ್ ಮಂಜಪ್ಪನವರ ಪುತ್ಥಳಿ ನಿರ್ಮಿಸಿಕೊಟ್ಟಾಗ ದಾವಣಗೆರೆಯಲ್ಲಿ ಅಖಿಲ ಭಾರತ ವೀರಶೈವ ಸಮಾಜ ಸಂಘದ ಅಧ್ಯಕ್ಷರಾದ ಹಿರೇಮಠದ ಸದ್ಯೋಜಾತ ಸ್ವಾಮಿಗಳು ಸನ್ಮಾನ ನೀಡಿರುತ್ತಾರೆ. 1990ರಲ್ಲಿ ಕರ್ನಾಟಕ ರಾಜ್ಯ ವಿಶ್ವಕರ್ಮ ಸಮ್ಮೇಳನ ನಡೆದಾಗ ಪರಮೇಶ್ವರಾಚಾರ್ಯರನ್ನು ಗುರುತಿಸಿ ಸನ್ಮಾನ ಮಾಡಲಾಗಿದೆ.

1991ರಲ್ಲಿ ಬೆಂಗಳೂರಿನಲ್ಲಿ ಕರ್ನಾಟಕ ರಾಜ್ಯ ಕರಕುಶಲ ಅಬಿವೃದ್ಧಿ ನಿಗಮದ ವತಿಯಿಂದ ರಾಜ್ಯಪಾಲರಾಗಿದ್ದ ಶ್ರೀ ಖುರ್ಷಿದ್ ಆಲಂ ಖಾನ್‌ರವರಿಂದ "ಕರ್ನಾಟಕ ರಾಜ್ಯ ಪ್ರಶಂಸನಾ ಪತ್ರ" ನೀಡಿ ಗೌರವಿಸಲಾಯಿತು. 1992ರಲ್ಲಿ ಕರ್ನಾಟಕ ರಾಜ್ಯ ಕರಕುಶಲ ಅಭಿವೃದ್ಧಿ ನಿಗಮ, ಬೆಂಗಳೂರು ವತಿಯಿಂದ ಏರ್ಪಡಿಸಿದ ಸನ್ಮಾನ ಕಾರ್ಯಕ್ರಮದಲ್ಲಿ ಮಾಜಿ ಮುಖ್ಯಮಂತ್ರಿ ವೀರಪ್ಪ ಮೊಯ್ಲಿಯವರು 'ಕರ್ನಾಟಕ ರಾಜ್ಯ ಪ್ರಶಸ್ತಿ'ಯನ್ನು ಪ್ರದಾನ ಮಾಡಿರುತ್ತಾರೆ.

1993ರಲ್ಲಿ ಶ್ರೀ ಭಗತ್‌ಸಿಂಗ್ ಪುತ್ಥಳಿ ನಿರ್ಮಿಸಿಕೊಟ್ಟದ್ದಕ್ಕಾಗಿ ದಾವಣಗೆರೆ ನಗರಸಭೆ ಮತ್ತು ಭಗತ್‌ಸಿಂಗ್ ಯುವಕ ಸಂಘವು ಸನ್ಮಾನ ಮಾಡಿ ನೆನಪಿನ ಕಾಣಿಕೆಯನ್ನು ನೀಡಿವೆ. 1995ರಲ್ಲಿ ಕರ್ನಾಟಕ ರಾಜ್ಯ ಶಿಲ್ಪಕಲಾ ಅಕಾಡೆಮಿಯ ಪ್ರಶಸ್ತಿಯನ್ನು ಬೆಂಗಳೂರಿನಲ್ಲಿ ಶ್ರೀ ಯು. ಆರ್. ಅನಂತಮೂರ್ತಿಯವರಿಂದ ಪ್ರದಾನ ಮಾಡಲಾಗಿದೆ.

1996ರಲ್ಲಿ ಚನ್ನಗಿರಿಗೆ ದಿ|| ಆರ್. ಮರುಳಪ್ಪನವರ ಕಂಚಿನ ಪುತ್ಥಳಿಯನ್ನು ನಿರ್ಮಿಸಿಕೊಟ್ಟ ಸಂದರ್ಭದಲ್ಲಿ ಆಗಿನ ಮುಖ್ಯಮಂತ್ರಿ ಜೆ.ಎಚ್. ಪಟೇಲ್ ಮತ್ತು ಶ್ರೀ ಪಂಡಿತಾರಾಧ್ಯ ಮಹಾಸ್ವಾಮಿಗಳು 'ಶಿಲ್ಪ ಕಲಾ ಭೂಷಣ' ಬಿರುದು ಕೊಟ್ಟು ಸನ್ಮಾನ ಮಾಡಿರುತ್ತಾರೆ. 1997ರಲ್ಲಿ ದಾವಣಗೆರೆಯಲ್ಲಿ ಶ್ರೀ ವಿಶ್ವಬ್ರಾಹ್ಮಣ ಯುವಕ ಸಂಘವು ಸನ್ಮಾನ ಮಾಡಿ ನೆನಪಿನ ಕಾಣಿಕೆ ನೀಡಿದೆ. 1997ರಲ್ಲಿ ಅರೆಮಾದನಹಳ್ಳಿ ಸಂಸ್ಥಾನ ಮಠದ

ಶ್ರೀ ಮದಾದಿ ಜಗದ್ಗುರು ಶ್ರೀ ಶಿವ ಸುಜ್ಞಾನ ಪ್ರಭು ಮಹಾಸ್ವಾಮಿಗಳು 'ಭೌವನ ಶಿಲ್ಪಿ' ಎಂಬ ಬಿರುದು ನೀಡಿ ಸನ್ಮಾನಿಸಿರುತ್ತಾರೆ. 1998ರಲ್ಲಿ ಶಿವಮೊಗ್ಗದ ರಾಷ್ಟ್ರೀಯ ಶಿಕ್ಷಣ ಸಮಿತಿಯ ದಿ । ಎಸ್. ಆರ್. ನಾಗಪ್ಪ ಶ್ರೇಷ್ಠಿಯವರ ಕಂಚಿನ ಪುತ್ಥಳಿ ನಿರ್ಮಿಸಿದ್ದಕ್ಕಾಗಿ ಡಾ॥ ಎಚ್. ನರಸಿಂಹಯ್ಯನವರಿಂದ ಸನ್ಮಾನ ಏರ್ಪಡಿಸಿ ನೆನಪಿನ ಕಾಣಿಕೆ ನೀಡಿರುತ್ತದೆ. 1997ರಲ್ಲಿ ಶ್ರೀಮದ್ ಬೆಲಗೂರು ಸಂಸ್ಥಾನ ವಡ್ಡನಾಳ್ ಪೀಠಾಧ್ಯಕ್ಷರಾದ ಶ್ರೀ ಶ್ರೀ ಶಂಕರಾಚಾರ್ಯ ಮಹಾ ಸ್ವಾಮಿಗಳು ಗೌರವ ಪ್ರಶಸ್ತಿ ನೀಡಿರುತ್ತಾರೆ.

ಶ್ರೀ ಪರಮೇಶ್ವರಾಚಾರ್ಯರಿಗೆ ಕ್ರಿ.ಶ. 2000ನೇ ಇಸವಿಯಲ್ಲಿ (19-11-2000) ಪ್ರಿಯದರ್ಶಿನಿ ಇಂದಿರಾಗಾಂಧಿ ಅವಾರ್ಡ್ ದೊರೆತಿದೆ. ಡಾ। ಜಿ. ಪರಮೇಶ್ವರವರು ಈ ಪ್ರಶಸ್ತಿ ಪ್ರದಾನ ಮಾಡಿರುತ್ತಾರೆ. ಇದೇ ಅವಧಿಯಲ್ಲಿ ಕರ್ನಾಟಕ ಸರ್ಕಾರ ಕ್ರಿ.ಶ. 2000ದ ಪ್ರತಿಷ್ಠಿತ 'ಜಕಣಾಚಾರಿ' ಪ್ರಶಸ್ತಿಯ ಗರಿಯನ್ನು ಶಿಲ್ಪಿ ಎಂ. ಪರಮೇಶ್ವರಾಚಾರ್ಯರ ರುಮಾಲಿಗೆ ಸಿಕ್ಕಿಸಿತು. ಸನ್ಮಾನ್ಯ ಮುಖ್ಯ ಮಂತ್ರಿಗಳಾದ ಎಸ್.ಎಂ. ಕೃಷ್ಣರವರು ದಿನಾಂಕ 29-3-2001 ರಂದು ಈ ಪ್ರಶಸ್ತಿಯನ್ನು ಪ್ರದಾನ ಮಾಡಿ ಗೌರವಿಸಿದರು. ಇದಾದ ಮೇಲೆ ಜಕಣಾಚಾರ್ಯ ಪ್ರಶಸ್ತಿ ಪಡೆದದ್ದಕ್ಕಾಗಿ ಸನ್ಮಾನ್ಯ ರಾಜ್ಯಪಾಲರಾದ ಶ್ರೀಮತಿ ವಿ. ಎಸ್. ರಮಾದೇವಿಯವರೂ ಸಹ ಶಿಲ್ಪಿ ಎಂ. ಪರಮೇಶ್ವರಾ ಚಾರ್ಯರನ್ನು ಸನ್ಮಾನಿಸಿ ಬೀಳ್ಕೊಟ್ಟಿರುತ್ತಾರೆ.

21-9-2003ರಂದು ಸ್ಟೇಟ್ ಬ್ಯಾಂಕ್ ಆಫ್ ಮೈಸೂರ್‌ನ 90 ವರ್ಷಗಳ ಆಚರಣೆಯ ಸಲುವಾಗಿ ಚನ್ನಗಿರಿ ಶಾಖೆಯು ತಾಲ್ಲೂಕಿನ ಪ್ರಸಿದ್ಧ ವ್ಯಕ್ತಿಯೆಂದು ಆಚಾರ್ಯರನ್ನು ಗುರುತಿಸಿ ಸನ್ಮಾನಿಸಿದೆ. ಇವೆಲ್ಲವೂ ಆಚಾರ್ಯರಿಗೆ ಬಿಡಿಬಿಡಿ ಯಾಗಿ ಸಂದ ಪ್ರಶಸ್ತಿ, ಗೌರವ, ಸನ್ಮಾನಗಳು. ಸಾಹಿತಿಗಳನ್ನು ಗುರುತಿಸುವ ಮಟ್ಟಿಗೆ ಕಲಾವಿದರನ್ನು ಗುರುತಿಸುತ್ತಿಲ್ಲವೇನೋ ಎನಿಸುತ್ತಿದೆ. ಕಲಾವಿದನ ಅವಿನಾಶಿಯಾದ ಸೇವೆಗೆ ಸಮಗ್ರ ಮನ್ನಣೆ ಸಿಕ್ಕಾಗಲೇ ಕಲಾವಿದ ಧನ್ಯನಾಗುತ್ತಾನೆ. ಅನೇಕ ರಾಜ್ಯ, ರಾಷ್ಟ್ರ ಮಟ್ಟದ ದಿನಪತ್ರಿಕೆ, ವಾರ ಪತ್ರಿಕೆ, ಮಾಸ ಪತ್ರಿಕೆಗಳು ಸ್ಮರಣ ಸಂಚಿಕೆಗಳು ಈ ಶಿಲ್ಪಿಯ ಕಲಾ ಸೇವೆಯನ್ನು ಮುಕ್ತಕಂಠದಿಂದ ಹಾಡಿ ಹೊಗಳಿವೆ.

ಆಡು ಮುಟ್ಟದ ಸೊಪ್ಪಿಲ್ಲ ಎಂಬ ಮಾತಿದೆ. ಹಾಗೆಯೆ ಪರಮೇಶ್ವರಾ

ಚಾರ್ಯರು ಎಲ್ಲ ಕ್ಷೇತ್ರಗಳಲ್ಲಿ ಕೈಯಾಡಿಸಿದ್ದಾರೆ. ಒಂಟಿ ಸಲಗದ ಹಾಗೆ ದೊಡ್ಡ ದೊಡ್ಡ ಕೆಲಸಗಳನ್ನೂ ಮಾಡಿದ್ದಾರೆ. ಹೀಗೆ ಅಜ-ಗಜ ಎರಡೂ ಲಕ್ಷಣ ಹೊಂದಿದವರು ಶಿಲ್ಪಿ ಎಂ.ಪರಮೇಶ್ವರಾಚಾರ್ಯರು. ನಯ, ವಿನಯಶೀಲ, ಮಿತಭಾಷಿಯಾದ ಮಂದನಗೆಯ ವ್ಯಕ್ತಿ ಸ್ನೇಹ ಜೀವಿ. ಕೆಲಸಕ್ಕೆ ಮೊದಲ ಆದ್ಯತೆ.

ತಮ್ಮ ಶಿಲ್ಪಕಾರ್ಯದ ಜೊತೆಗೆ 1959ನೇ ಇಸವಿಯಲ್ಲಿ ಇವರು ಪ್ರಪ್ರಥಮ ಬಾರಿಗೆ ನಿಂತುಹೋಗಿದ್ದ ಮೋಟಾರ್‌ಗಳನ್ನು ರಿವೈಂಡಿಂಗ್ ಮಾಡಿ ನಡೆಯುವಂತೆ ಮಾಡಿರುತ್ತಾರೆ. ವಿದ್ಯುತ್ ಕಂಟ್ರಾಕ್ಟರ್‌ಗಳನ್ನು ಮಾಡಿರುತ್ತಾರೆ. ಶಿವಮೊಗ್ಗ ಚಿತ್ರದುರ್ಗ, ದಾವಣಗೆರೆ ಚಿಕ್ಕಮಗಳೂರು ಜಿಲ್ಲೆಗಳಲ್ಲೇ ಪ್ರಪ್ರಥಮವಾಗಿ ಬಾವಿಯಲ್ಲಿ ಕೊಳವೆ ಬಾವಿ ಕೊರೆಯುವ ಯಂತ್ರವನ್ನು ತಂದು ಅನೇಕರಿಗೆ ಬೋರ್ ಕೊರೆದು ನೀರು ತೆಗೆದುಕೊಟ್ಟಿರುತ್ತಾರೆ. 1970ರಲ್ಲಿ ಗೊಪ್ಪೇನಹಳ್ಳಿ ವ್ಯಾಪ್ತಿ ಪಂಚಾಯಿತಿಗೆ ವೈಸ್ ಛೇರ್ಮನ್ ಆಗಿ ಆರಿಸಿ ಬಂದು ಜನಪ್ರಿಯ ಕೆಲಸ ಮಾಡಿರುತ್ತಾರೆ. ವ್ಯವಸಾಯ ಮತ್ತು ತೋಟಗಾರಿಕೆಯನ್ನು ನಿರಂತರವಾಗಿ ಮಾಡಿಕೊಂಡು ಬರುತ್ತಿದ್ದಾರೆ. ಇವರ ಬಹುಪಾಲು ಶಿಲ್ಪಗಳು ಕರ್ನಾಟಕದಲ್ಲಿವೆ. ಕೆಲವು ಆಂಧ್ರ, ಮುಂಬೈಯಲ್ಲೂ ಇವೆ. 1975ರಲ್ಲಿ ಇವರು 'ಶ್ರೀನಿವಾಸ ಕಲ್ಯಾಣ ಚರಿತೆ' ಯನ್ನು ಸುಮಾರು 200ಪುಟಗಳಲ್ಲಿ, ಬಾಮಿನಿ ಷಟ್ಪದಿಯಲ್ಲಿ ಬರೆದಿದ್ದಾರೆ ಈ ಕೃತಿಯನ್ನು ಮುದ್ರಿಸಿ ಪ್ರಕಟಿಸಬೇಕಾಗಿದೆ.

ಅನೇಕರು ಪರಮೇಶ್ವರಾಚಾರ್ಯರ ಶಿಷ್ಯರಾಗಿ ಹೊರಹೊಮ್ಮಿದ್ದಾರೆ. ತಮ್ಮ ಬಹುಪಾಲು ಕೆಲಸಗಳ ಸಹಾಯಕ್ಕಾಗಿ ಪರಮೇಶ್ವರಾಚಾರ್ಯರು ಅವರನ್ನು ವಿನಿಯೋಗಿಸಿಕೊಂಡಿದ್ದಾರೆ. ಶಿಷ್ಯರು ಗುರುಗಳಿಂದ ಸಾಕಷ್ಟು ಪಾಠ ಕಲಿತು ತರಬೇತಿ ಪಡೆದಿದ್ದಾರೆ. ಇವರೆಲ್ಲ ಈಗ ಸ್ವತಂತ್ರವಾಗಿ ಕೆಲಸ ಮಾಡುತ್ತಿದ್ದಾರೆ. ಶಿಲ್ಪದಲ್ಲಿ ಕೆಲವರು ಸಹಶಿಲ್ಪಿಗಳಾಗಿ ಪ್ರಮುಖ ಪಾತ್ರವನ್ನು ನಿರ್ವಹಿಸಿರುತ್ತಾರೆ. ಪರಮೇಶ್ವರಾಚಾರ್ಯರ ಹಿರಿಯ ಮಗನಾದ ಎಂ.ಪಿ. ಶ್ರೀಕಂಠಾಚಾರ್ಯರು (ವಯಸ್ಸು 50 ವರ್ಷ) ತಂದೆಯ ಶಿಲ್ಪ ಶಾಲೆಯಲ್ಲಿ ಚೆನ್ನಾಗಿ ಪಳಗಿ ಒಬ್ಬ ರಥಶಿಲ್ಪಿ ಎನಿಸಿಕೊಂಡಿದ್ದಾರೆ. ತಂದೆಯವರ ಎಲ್ಲ ಶಿಲ್ಪ ವಿದ್ಯೆಗಳನ್ನೂ ಅವರು ಕಲಿತುಕೊಂಡಿದ್ದಾರೆ. ತಂದೆಯವರ ಸಾಧನೆಗೆ ಸದಾ ಬೆಂಬಲವಾಗಿ ದುಡಿಯುತ್ತಾ ಬಂದಿದ್ದಾರೆ. ಪರಮೇಶ್ವರಾಚಾರ್ಯರು ಮಾಡುತ್ತಾ ಬಂದಿರುವ ಎಲ್ಲ ಶಿಲ್ಪ ಕಾರ್ಯಗಳ ಅತಿ ಹೆಚ್ಚು ಕೆಲಸವನ್ನು ಇವರೊಬ್ಬರೇ ನಿರ್ವಹಿಸುತ್ತಾ ಬಂದಿದ್ದಾರೆ. ಆದ್ದರಿಂದ ಪರಮೇಶ್ವರಾಚಾರ್ಯರಿಗೆ ಗೌರವ ಸಲ್ಲುವ ಕಡೆಗಳಲ್ಲಿ ಶ್ರೀಕಂಠಾಚಾರ್ಯರಿಗೂ ಗೌರವ ಸಲ್ಲುತ್ತಾ ಬಂದಿದೆ.

ಪರಮೇಶ್ವರಾಚಾರ್ಯರ ಶಿಲ್ಪ ಕಾರ್ಯದ ಸಮಪಾಲು ಅವರ ಹಿರಿಯ ಮಗ ಸಹಶಿಲ್ಪಿ ಆದ ಈ ಶ್ರಿಕಂಠಾಚಾರ್ಯರಿಗೇ ಸಲ್ಲುತ್ತದೆ.

ರಥ, ಶಿಲಾ ಮತ್ತು ಲೋಹ ಶಿಲ್ಪಗಳು ಹೆಚ್ಚಾಗಬೇಕಾಗಿರುವ ಈ ಸಂದರ್ಭದಲ್ಲಿ ಶಿಲ್ಪಿ ಪರಮೇಶ್ವರಾಚಾರ್ಯರ ಕಲಾ ಪರಂಪರೆಯನ್ನು ಶಿಲ್ಪಿ ಶ್ರೀಕಂಠಾಚಾರ್ಯರು ಮುಂದುವರಿಸಿಕೊಂಡು ಹೋಗುತ್ತಿದ್ದಾರೆ. ಶಿಲ್ಪಿ ಪರಮೇಶ್ವರಾಚಾರ್ಯರಿಗೆ ಈಗ 80 ವರ್ಷ ವಯಸ್ಸು. ಚಟುವಟಿಕೆಯಿಂದ ಇದ್ದಾರೆ. ಶ್ರೀಕಂಠಾಚಾರ್ಯರು ಸಮಯ ವ್ಯರ್ಥ ಮಾಡದೆ ತಮ್ಮ ಶಿಷ್ಯರೊಂದಿಗೆ ದುಡಿಯುತ್ತಿದಾರೆ. ರಥ, ಕಾಷ್ಠ, ದೇವಾಲಯ, ಶಿಲಾ ಮತ್ತು ಲೋಹ ಶಿಲ್ಪಗಳನ್ನು ತಯಾರಿಸಲು ಸದಾ ಸಿದ್ಧವಾಗಿರುವ ಶ್ರೀಕಂಠಾಚಾರ್ಯರು ಪರಮೇಶ್ವರಾಚಾರ್ಯರ ಶಿಲ್ಪ ಪರಂಪರೆಯನ್ನು ಅಭಿವೃದ್ಧಿಪಡಿಸುತ್ತಾರೆಂದೂ, ಹಾಗೆಯೇ ಸಮಾಜ, ಗಣ್ಯರು ಮತ್ತು ಸಾಮಾಜಿಕರು ಪ್ರಪಂಚಕ್ಕೇ ಮಾದರಿಯಾದ ತಮ್ಮ ಅಪ್ರತಿಮ ಕಲಾ ಪರಂಪರೆಯನ್ನು ಸಂರಕ್ಷಿಸಿ ಮುಂದಿನ ತಲೆಮಾರುಗಳಿಗೆ ವರ್ಗಾಯಿಸುತ್ತಾರೆಂದೂ ಆಶಿಸೋಣ.

## ಶಿಲ್ಪಕಲಾ ಅಕಾಡೆಮಿಯ ಪ್ರಕಟಣೆಗಳು

| | |
|---|---|
| ಜಕಣಾಚಾರ್ಯ | ರೂ. ೪೦.೦೦ |
| ಶಿಲ್ಪ ಸಂಕುಲ | ರೂ. ೨೫.೦೦ |
| ಕಲಾರಾಧನೆ | ರೂ. ೨೫.೦೦ |
| ಹೊಯ್ಸಳ ಶಿಲ್ಪಕಲೆ (ಶಿಲ್ಪಸಂಪುಟ) | ರೂ. ೫೦.೦೦ |
| ಶ್ರೀ ಕಾಶ್ಯಪ ಶಿಲ್ಪಶಾಸ್ತ್ರಂ | ರೂ. ೨೨೫.೦೦ |
| ಶಿಲ್ಪಬ್ರಹ್ಮ ಸಿ. ಪರಮೇಶ್ವರಾಚಾರ್ಯ | ರೂ. ೧೫.೦೦ |
| ಉತ್ತುಂಗ ಕುಶಲಶಿಲ್ಪಿ ದೇವಲಕುಂದ ವಾದಿರಾಜ್ | ರೂ. ೧೫.೦೦ |
| ಶಿಲ್ಪಿಸಿದ್ಧಾಂತಿ ಶ್ರೀ ಸಿದ್ಧಲಿಂಗ ಸ್ವಾಮಿಗಳು | ರೂ. ೫೦.೦೦ |
| ಶಿಲ್ಪಸಿದ್ಧಾಂತಿ ಶ್ರೀ ಸಿದ್ಧಲಿಂಗ ಸ್ವಾಮಿಗಳು ಶಿಲ್ಪ - ಚಿತ್ರಸಂಪುಟ | ರೂ. ೫೦.೦೦ |
| ಸಾತ್ವಿಕ ಶಿಲ್ಪಿ ನಾಗೇಂದ್ರ ಸ್ಥಪತಿ | ರೂ. ೧೫.೦೦ |
| ಶಿಲ್ಪಕಲಾ ಆರಾಧಕರು | ರೂ. ೨೦.೦೦ |
| ಭಾರತೀಯ ಶಿಲ್ಪಕಲೆ | ರೂ. ೫೦.೦೦ |
| ವರಶಿಲ್ಪಿ ಗುಂಡಪ್ಪ ಮಾಯಾಚಾರ್ಯ | ರೂ.೧೫.೦೦ |
| ಕೆ. ಶಾಮರಾಯ ಆಚಾರ್ಯ | ರೂ. ೧೫.೦೦ |
| ಎನ್. ಜಿ. ನೀಲಕಂಠಾಚಾರ್ | ರೂ. ೧೫.೦೦ |
| ರೂಪ ಲಕ್ಷಣ ಸಂಗ್ರಹ ಭಾಗ-೧ | ರೂ. ೨೦೦.೦೦ |
| ಕಲಾಚರಿತ್ರೆ ಭಾಗ - ೧ | ರೂ. ೧೦೦.೦೦ |
| ಶ್ರೀ ತಿಪ್ಪಾಜಪ್ಪನವರ ರೇಖಾಚಿತ್ರಗಳು | ರೂ. ೧೦೦.೦೦ |
| ಎನ್. ಪಿ. ಶ್ರೀನಿವಾಸಚಾರ್ | ರೂ. ೧೫.೦೦ |
| ಸಮಕಾಲೀನ ಸಂಪುಟ | ರೂ. ೫೦.೦೦ |